


# ಸಪ್ತಗಿರಿ

ಕನ್ನಡ, ತೆಲುಗು, ತಮಿಳು, ಇಂಗ್ಲೀಷ್, ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್,
ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.
ಟೆಲಿಫೋನ್ ನಂಬರು; 2254

ಮುದ್ರಣ:
ಯಂ. ವಿಜಯಕುಮಾರ್‌ರೆಡ್ಡಿ
ಮೇನೆಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು; 2340

ಮಿಕ್ಕ ವಿವರಗಳಿಗೆ:
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ





ಸಂಪುಟ 11] ಏಪ್ರಿಲ್ 1981 [ಸಂಚಿಕೆ 11

## ವಿಷಯಸೂಚಿ

# ಓದುಗರ ಓಲೆ

ಮಾನ್ಯರೇ

ತಮ್ಮ "ಸಪ್ತಗಿರಿ'' ಪತ್ರಿಕೆಯಲ್ಲಿ ಅತ್ಯಂತ ಭಕ್ತಿರಸ ಪೂರ್ಣ ಲೇಖನ, ಕವನ, ಗ್ರಂಥವಿಮರ್ಶೆಗಳು ಪ್ರಕಟವಾಗುತ್ತಿರುವುದು ತುಂಬ ಸಂತಸದ ಸಂಗತಿ. ಭಕ್ತರು. ಸಾಧುಸಂತರ ಜೀವನ ಪರಿಚಯ, ಅವರ ದಿವ್ಯವಾಣಿ ಇತ್ಯಾದಿಗಳನ್ನು ಪ್ರಕಟಿಸುತ್ತ ಇದ್ದು ಆಬಾಲವೃದ್ಧರಿಗೆ ಭಕ್ತಿ ಹಾಗೂ ಜ್ಞಾನದ ಸಂದೇಶವನ್ನು ನೀಡುತ್ತಿರುವುದಕ್ಕೆ ಕನ್ನಡದ ಜನ ಕೃತಜ್ಞರಾಗಿದ್ದೇವೆ.

ಆಗಾಗ ಶ್ರೀ ಶ್ರೀನಿವಾಸದೇವರ ಉತ್ಸವಾದಿ ವಿಶೇಷಗಳು ಜರುಗುವುದಿದ್ದಲ್ಲಿ ಅಂಥ ಸಮಾಚಾರಗಳನ್ನು ಸಹ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರೆ ಎಷ್ಟೋ ಅನುಕೂಲ.

ಎ. ಕೆ. ಮಾಳೋದಿ, ಗದಗ-ಬೆಟಗೇರಿ

(ಈಗಾಗಲೇ ತಿರುಮಲೆಯಲ್ಲಿ ನಡೆಯುವ ಉತ್ಸವಾದಿಗಳ, ವಿಶೇಷ ಕಾರ್ಯಕ್ರಮಗಳ ವಿವರಗಳು 'ಸಪ್ತಗಿರಿ' ಯಲ್ಲಿ ಬಂದಿರುವುದನ್ನು ಗಮನಿಸಬಹುದು — ಸಂ.)

# ಮುಖಚಿತ್ರ

ರೌದ್ರಿ ಸಂವತ್ಸರ ಮುಗಿಯಿತು. ದುರ್ಮತಿ ಸಂವತ್ಸರದಲ್ಲಿ ಹೆಜ್ಜೆಯಿಟ್ಟು ಮುಂದುವರೆಯುತ್ತಿದ್ದೇವೆ. ವಸಂತದಿಂದ ಶಿಶಿರ ಮತ್ತೆ ವಸಂತ. 'ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ, ಹೊಸ ವರುಷಕೆ ಹೊಸ ಹರುಷವ ಹೊಸತು ಹೊಸತು ತರುತಿದೆ'- ಹೀಗೆ ಕಾಲದ ಚಕ್ರಾರಪಂಕ್ತಿ ತಿರುಗುತ್ತಲೇ ಸ್ಥಾಯಿಯಂತೆ ಬಹಿರ್ಗತವಾಗುತ್ತಿದೆ. ಆದರೂ ಅನುಕ್ಷಣ ಅನುಭವದಲ್ಲಿ ಹೊಸತು ಕಂಡುಬರುತ್ತಲೇ ಇದೆ. ಚಂದ್ರ, ಸೂರ್ಯ, ನಕ್ಷತ್ರಮಂಡಲ, ನದೀ ನದ ಪರ್ವತಗಳು ಭೂಮಿ ಎಲ್ಲವೂ ಅನೇಕ ಸಹಸ್ರ ವರ್ಷಗಳಿಂದಲೂ ಮಹತ್ತರವಾದ ಕಾಲಚಕ್ರ ಪರಿಭ್ರಮಣೆಯಲ್ಲಿ ತಿರುಗುತ್ತಿದ್ದರೂ ಎಲ್ಲದರ ಹಿಂದೆ ಯಾವುದೋ ಚಿಚ್ಛಕ್ತಿಯೊಂದು ಅನುಕ್ಷಣವೂ ಕಾರ್ಯಪ್ರವೃತ್ತವಾಗಿ ಇದ್ದೇ ಇದೆ ಎಂಬುದು ಸ್ಪಷ್ಟ. ಆ ಮಹಾಶಕ್ತಿಯನ್ನು 'ಶೈವರು ಶಿವನೆಂದೂ ವೈಷ್ಣವರು ವಿಷ್ಣುವೆಂದೂ ನೈಯ್ಯಾಯಿಕರು ಕರ್ತನೆಂದೂ ಬೌದ್ಧರು ಬುದ್ಧನೆಂದೂ ಜೈನರು ಜಿನನೆಂದೂ' ಕರೆದು ತೃಪ್ತಿಗೊಳ್ಳುತ್ತಿದ್ದಾರೆ. ಆ ಶಕ್ತಿ ಶ್ರೀವೆಂಕಟೇಶ್ವರಸ್ವಾಮಿಯಂತೆ ನಮ್ಮ ಚಿತ್ರಗಾರರಿಗೆ ಕಂಡುಬಂದಿದೆ. ವರದಹಸ್ತ, ಊರ್ಧ್ವಪುಂಡ್ರಗಳ ಈ ಚಿತ್ರ ವಿಷ್ಣು ಸಹಸ್ರನಾಮದ ಕೆಳಗಣ ಶ್ಲೋಕಕ್ಕೆ ಹತ್ತಿರವಾಗಿದೆ.

ಭೂಃಪಾದೌ ಯಸ್ಯನಾಭಿರ್ವಿಯದಸುರನಿಲಶ್ಚಂದ್ರ ಸೂರ್ಯೌಚ ನೇತ್ರೇ
ಕರ್ಣಾ ವಾಶಾಶ್ಶಿರೋ ದ್ಯೌರ್ಮುಖಮಪಿ ದಹನೋಯಸ್ಯವಾಸ್ತೇಯಮಬ್ಧಿಃ
ಅಂತಸ್ಸ್ಥಂ ಯಸ್ಯ ವಿಶ್ವಂ ಸುರನರ ಖಗಗೋಭೋಗಿ ಗಂಧರ್ವ ದೈತ್ಯೈಃ
ಚಿತ್ರಂ ರಂರಮ್ಯತೇತಂ ತ್ರಿಭುವನವಪುಷಂ ವಿಷ್ಣುಮೀಶಂ ನಮಾಮಿ.

ಚಿತ್ರ: ಶ್ರೀ ಉದಯಗಿರಿ.

# ರಾಯಚೂರು ಜಿಲ್ಲೆಯ ಹರಿದಾಸರು

**— ಶ್ರೀ ಪ್ರಹ್ಲಾದಾಚಾರ್ಯ ಜೋಷಿ.**

ಕೃಷ್ಣೆ ತುಂಗೆಯರ ಮಧ್ಯದಲ್ಲಿರುವ ರಾಯಚೂರು ಜಿಲ್ಲೆ ಅನೇಕ ಕಲೆ ಸಾಹಿತ್ಯ ಸಂಸ್ಕೃತಿಗಳಿಗೆ ನೆಲೆವೀಡಾದಂತೆ ಹರಿದಾಸರು ಶರಣರು ಹೆಚ್ಚಾಗಿ ಇಲ್ಲಿಯೇ ಅವತರಿಸಿ ಇಲ್ಲಿಯ ನೆಲ ಜಲವನ್ನು ಪಾವನಗೊಳಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಶ್ರೀ ನರಹರಿ ತೀರ್ಥರಿಂದ ಪ್ರಾರಂಭವಾದ ದಾಸಸಾಹಿತ್ಯದ ಮೊದಲಘಟ್ಟವು ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರ, ಕನಕದಾಸರಿಂದ ಅಭಿವೃದ್ಧಿಹೊಂದಿ ಕನ್ನಡ ಪದಗಳು ಮನೆಮನೆಯ ಮಾತಾಗಿ ಬೆಳೆಯಿತು. ಪುರಂದರ ಕನಕದಾಸರ ತರುವಾಯ ಸುಮಾರು ಇನ್ನೂರೈವತ್ತು ವರ್ಷಗಳವರೆಗೆ ಯವನರ ಉಪಟಳದಿಂದಾಗಿ ಅಷ್ಟೊಂದು ಹೇಳಿಕೊಳ್ಳುವಂಥ ಸಾಹಿತ್ಯದ ಸೃಷ್ಟಿ ಈ ಅವಧಿಯಲ್ಲಿ ಆಗಲಿಲ್ಲವೆಂದು ಕಂಡು ಬರುತ್ತದೆ.

ದಾಸಸಾಹಿತ್ಯದ ದ್ವಿತೀಯ ಘಟ್ಟದ ಮೊದಲಿಗರಾದ ಶ್ರೀವಿಜಯದಾಸರು ಈ ಜಿಲ್ಲೆಯ ಮಾನವಿ ತಾಲೂಕಿನ ಚೀಕಲಪರವಿಗ್ರಾಮದಲ್ಲಿ ಜನಿಸಿದ್ದರಿಂದ, ಇವರಿಂದಲೇ ದಾಸವಂಶದ ಪರಂಪರೆ ಬೆಳೆಯತೊಡಗಿತು. ಇದೇ ಜಿಲ್ಲೆಯ ಗೋಪಾಲದಾಸರು, ಜಗನ್ನಾಥದಾಸರು, ಪ್ರಾಣೇಶದಾಸರು, ಕಲ್ಲೂರ ಸುಬ್ಬಣ್ಣದಾಸರು, ಮೋಹನದಾಸರು, ತಿಮ್ಮಣ್ಣದಾಸರು, ಇವರೆಲ್ಲ ವಿಜಯದಾಸರ ಶಿಷ್ಯಕೋಟಿಯಲ್ಲಿ ಅತ್ಯಂತ ಪ್ರಖ್ಯಾತರಾದವರು. ಈ ಎಲ್ಲ ದಾಸಶ್ರೇಷ್ಠರ ಜೀವನ ಚರಿತ್ರೆ ಅವರ ಸಾಹಿತ್ಯ ಪ್ರಕಟನೆಯನ್ನು ನಾಡಿನ ಹಲವಾರು ಜನ ಕೈಕೊಂಡು ಈಗಾಗಲೇ ಸಾಕಷ್ಟು ಬೆಳಕಿಗೆ ತಂದಿದ್ದಾರೆ.

ದಾಸಚತುಷ್ಟಯರೆಂದು ಹೆಸರಾದ ಪುರಂದರ, ವಿಜಯ, ಗೋಪಾಲ, ಜಗನ್ನಾಥ ದಾಸರುಗಳ ಪರಮಾನುಗ್ರಹದಿಂದ ಸ್ವಪ್ನಾಂಕಿತರಾಗಿ ಇಲ್ಲವೇ ಇವರ ಶಿಷ್ಯಪ್ರಶಿಷ್ಯರಿಂದ ಅಂಕಿತ ಪಡೆದು ದಾಸಶ್ರೇಷ್ಠರ ಜಾಡಿನಲ್ಲಿಯೇ ಸಾಹಿತ್ಯರಚನೆಮಾಡಿದ, ಇತ್ತೀಚಿನ ದಾಸಸಮಾಜಕ್ಕೆ ನಾವು ದಾಸಸಾಹಿತ್ಯದ ತೃತೀಯಘಟ್ಟವೆಂದು ಹೆಸರಿಸಬಹುದು. ಸುಮಾರು ಕ್ರಿ. ಶ. ೧೮೦೦ ರಿಂದ ಇಲ್ಲಿಯವರೆಗೆ ಬೆಳೆದುಬಂದ ಹರಿದಾಸ ಪರಂಪರೆ, ದಾಸಸಾಹಿತ್ಯದ ತೃತೀಯಘಟ್ಟದ ಸಾಧನೆ, ಅದರ ಹಿರಿಮೆಗರಿಮೆಯನ್ನು ರಾಯಚೂರು ಜಿಲ್ಲೆಯಲ್ಲಿಯೇ ನಾವು ವಿಶೇಷವಾಗಿ ಕಾಣಬಹುದಾಗಿದೆ.

ಗಂಗಾವತಿ ತಾಲೂಕಿನ ಕನಕಗಿರಿಯ ಕರಣಿಕ ಮನೆತನದಲ್ಲಿ ಜನಿಸಿದ ಗುರುಶ್ರೀಶ ವಿಠಲಾಂಕಿತರಾದ ಕಂಜೋಜಿ ನರಸಿಂಹದಾಸರು, ಪುಂಡೇಕಾರ ದಾಸರಿಂದ ಅಂಕಿತ ಪಡೆದು ಅನೇಕ ದೇವರನಾಮ, ಸುಳಾದಿ, ಉಗಾಭೋಗಗಳು, ಅಧ್ಯಾತ್ಮ ಮಾಲಾ ಮೊದಲಾದ ಗ್ರಂಥಗಳನ್ನು ರಚಿಸಿ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇವರ ಶಿಷ್ಯರಲ್ಲಿ ವೆಂಕಟವಿಠಲ, ಲಕ್ಷ್ಮೀಪತಿವಿಠಲ ಮೊದಲಾದ ದಾಸಶ್ರೇಷ್ಠರು ಇವರಿಂದ ಅಂಕಿತಪಡೆದು ಪ್ರಖ್ಯಾತರಾಗಿದ್ದಾರೆ.

“ಬಾರೋ ಗುರು ರಾಘವೇಂದ್ರ, ಬಾರಯ್ಯ ಬಾಬಾ” ಎನ್ನುವ ಗುರುಶ್ರೀಶ ವಿಠ್ಠಲರ ಪದ ಈಗಾಗಲೇ ಹೆಚ್ಚುಪ್ರಚಲಿತವಾಗಿದೆ.

ರಾಯಚೂರು ತಾಲೂಕಿನ ಅಸ್ಕಿಹಾಳ ಗೋವಿಂದದಾಸರು ರಘುಪತಿವಿಠಲರಿಂದ “ಗೋವಿಂದವಿಠಲ” ರೆಂಬ ಅಂಕಿತಪಡೆದು ಅನೇಕ ಭಕ್ತಿ ಗೀತೆಗಳು ಲಾವಣಿ, ಗೀಗಿಪದಗಳು, ‘ಕನಕಾಂಗಿ ಕಲ್ಯಾಣಿ’ ಎಂಬ ಬಯಲಾಟವನ್ನೂ ಸಹ ರಚಿಸಿದ್ದಾರೆ. ಇವರ ಸಾಹಿತ್ಯದಲ್ಲಿ ಭಕ್ತಿಭಾವ ತುಂಬಿತುಳುಕುತ್ತದೆ. ಗಿರಿರಾವ ಶೇಷಮ್ಮ ದಂಪತಿಗಳಲ್ಲಿ ಜನಿಸಿದ ಗೋವಿಂದದಾಸರು ಅಭಿಮನ್ಯುವಿನಂತೆ ಬಹು ಪರಾಕ್ರಮಶಾಲಿಯಾಗಿ, ಅತಿಚಿಕ್ಕವಯಸ್ಸಿನಲ್ಲಿಯೇ ಹರಿಪುರಕ್ಕೆ ತೆರಳಿದರೆಂದು ತಿಳಿದುಬರುತ್ತದೆ. “ಸಿರಿಗೋವಿಂದ ವಿಠ್ಠಲನ ಸ್ಮರಿಸೆ ಹರಿಪೊರೆವತ್ವರದಯಾಪಾಂಗ ಬಿಡುಮನ ಭವಾಖ್ಯದ ಉರಗದಸಂಗ”, ಎಂದು ಭಗಸಾಗರದಲ್ಲಿ ತೊಳಲಿ ಬಳಲುವ ಜೀವರಿಗೆ ದಾಸರು ಎಚ್ಚರಿಸಿದ್ದಾರೆ.

ಲಿಂಗಸೂಗೂರ ತಾಲೂಕಿನ ಸಂತೆಕಲ್ಲೂರ ಗ್ರಾಮದಲ್ಲಿ ‘ವರದೇಶವಿಠಲಾ’ಂಕಿತರಾದ ಸ್ವಾಮಿರಾಯರು ವೃತ್ತಿಯಿಂದ ವಕೀಲರಾಗಿದ್ದರೂ ಪ್ರವೃತ್ತಿಯಿಂದ ಹರಿದಾಸರಾಗಿ ಕೋಸಗಿಯ ಗುರು ಜಗನ್ನಾಥದಾಸರಿಂದ ಅಂಕಿತಪಡೆದು, ನೂರಾರು ಪದಪದ್ಯಗಳನ್ನು ರಚಿಸಿ ದಾಸಸಾಹಿತ್ಯವನ್ನು ಬೆಳಗಿಸಿದ್ದಾರೆ. ಹನುಮಂತರಾವ ತಂಗಮ್ಮ ದಂಪತಿಗಳಲ್ಲಿ ಜನಿಸಿದ ದಾಸರು ತಮ್ಮವಕೀಲಿ ವೃತ್ತಿಯಲ್ಲಿ ಮಾತ್ರ ಸತ್ಯಮಾರ್ಗವನ್ನೇ ಅನುಸರಿಸಿ ನ್ಯಾಯನಿಷ್ಠುರತೆಯಿಂದ ನಡೆದವರು. ಇವರಿಗೆ ಉರ್ದು, ಫಾರ್ಸಿ, ಮರಾಠಿಭಾಷೆಗಳ ಮೇಲೆ ಪ್ರಭುತ್ವವಿದ್ದು ಫಾರ್ಸಿಭಾಷೆಯಲ್ಲಿಯೂ



ಕವಿತೆಯನ್ನು ಬರೆದಿದ್ದಾರೆ. ಕ್ರಿ. ಶ. ೧೯೧೮ ರಲ್ಲಿ ತಮ್ಮ ಗುರುಗಳ ಸಮ್ಮುಖದಲ್ಲಿಯೇ ಇವರು ಹರಿಪುರಕ್ಕೆ ತೆರಳಿದರು.

“ಪರರ ನಿನ್ನಂತೆ ಬಗೆಯೆಲೊ ಮನವೆ ।
ನಿನ್ನಂತೆಬಗೆಯದಿದ್ದರೆ ಯಮನು
ಕೊರೆದು ಕೊಲ್ಲಿಸಿ ನಿನ್ನ ನಿರಯದೊಳಿರಿಸುವ”.

ಎಂಬುದಾಗಿ ದಾಸರು ಸ್ವಾರ್ಥಿಗಳನ್ನು ಎಚ್ಚರಿಸಿದ್ದಾರೆ.

ಕುಷ್ಟಗಿ ತಾಲೂಕಿನ ನಡುವಲಕೊಪ್ಪಗ್ರಾಮದಲ್ಲಿ ‘ನಡುಪುರೇಶ’ ಅಂಕಿತರಾದ ರಾಘವಾರ್ಯರು ಈ ಶತಮಾನದ ಆದಿಯಲ್ಲಿದ್ದು ಆಡುಭಾಷೆಯಲ್ಲಿ ತತ್ವಪ್ರಮೇಯಗಳನ್ನು ಅತ್ಯಂತ ಸುಲಭಶೈಲಿಯಲ್ಲಿ ನೂರಾರು ಪದಪದ್ಯಗಳನ್ನು ರಚಿಸಿದ್ದಾರೆ. ಜಾನಪದಭಾಷೆಯ ಸತ್ವ

ಸೌಂದರ್ಯವನ್ನು "ಎಲ್ಲಿಗ್ಹೋದಲ್ಲೇನು ಸುಖ ಇಲ್ಲೇಪಾಡೈತಿ, ಬಲ್ಲನರಗೊಂಭತ್ತು ಕದಗಳು ಕೆಲ್ಲೆವು ಪಾಡೈತಿ". ಎನ್ನುವ ಪದದಲ್ಲಿ ಕಾಣ ಬಹುದಾಗಿದೆ."ನಡಿ ಶಂಭೋ ಗಡ ಬಾ ಎನ್ನೊಡನೆ ನಾ ನಿನಗೊಂದು ಗುಡಿಕಟ್ಟಿ ಪೂಜಿಸುವೆ ನಡು ಪುರದಿ". ಎಂದು ಕಾಶಿವಿಶ್ವನಾಥನನ್ನು ತಮ್ಮೂರಿಗೆ ಬರಲು ಆಮಂತ್ರಿಸುತ್ತಾರೆ. ಕ್ರಿ. ಶ. ೧೯೦೪ ರಲ್ಲಿ ರಾಘವಾರ್ಯರು ವೈಕುಂಠವಾಸಿಗಳಾದರೂ ಅವರ ಸಾಹಿತ್ಯ ಮಾತ್ರ ಇನ್ನೂ ಅಮರವಾಗಿದೆ.

ದೇವದುರ್ಗತಾಲೂಕಿನ ಜೋಳದಹೆಡಗಿ ಗ್ರಾಮದಲ್ಲಿ ಜನಿಸಿದ ರಾಮದಾಸರು ಜಾತಿಯಿಂದ ಪಿಂಜಾರರಾದರೂ ದಾಸಸಾಹಿತ್ಯವನ್ನು ಅತ್ಯಂತ ಮೇಲ್ಮಟ್ಟದಲ್ಲಿ ಬೆಳಗಿಸಿದ್ದಾರೆ. ಇವರ ತಂದೆತಾಯಿ ಇಟ್ಟಹೆಸರು ಷೇಖಬಡೆಸಾಬ. ಇವರು ವೃತ್ತಿಯಿಂದ ಶಿಕ್ಷಕರು. ಹಂಪೆಯಲ್ಲಿರುವ ರಾಮಾವಧೂತರೆಂಬ ಸಾಧುಸತ್ಪುರುಷರಲ್ಲಿ ಶಿಷ್ಯತ್ವವಹಿಸಿ ಅವರಿಂದ "ರಾಮದಾಸ" ಎಂಬ ಅಂಕಿತ ಪಡೆದು ಸಹಸ್ರಾರು ದೇವರನಾಮಗಳನ್ನು, ಆಂಜನೇಯ ಶತಾಷ್ಟಕ, ವಿಠಲಶತಾಷ್ಟಕ, ಗೋವಿಂದಶತಾಷ್ಟಕ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.ಇವರು ತಮ್ಮ ಜೀವಿತಕಾಲವನ್ನು ಹೆಚ್ಚಾಗಿ ಲಿಂಗಸಗೂರ ತಾಲೂಕಿನ ಗೋನವಾರಗ್ರಾಮದ ಶಾನುಭೋಗರಲ್ಲಿ ಕಳೆದು ೧೯೪೦ ರಲ್ಲಿ ವೈಕುಂಠವಾಸಿಗಳಾದರೆಂದು ತಿಳಿದುಬರುತ್ತದೆ.

"ಧಾತ್ರಿತ್ರಯಂಗಳ ಸೂತ್ರಧಾರ ಹರಿ ಸ್ತೋತ್ರಕೆ ಸಿಲುಕಿದ ರಾಮ–ಹರಿ ಜೈ ಜೈ ಸೀತಾ ರಾಮ ". ಎಂಬ ಸ್ತೋತ್ರ ಪದ್ಯವನ್ನು——ವೃಂದಗಾನದಲ್ಲಿ ಭಕ್ತವೃಂದವು ತನ್ಮಯರಾಗಿ ಹೇಳುವಾಗ - ಅದು ಷೇಖಬಡೇಸಾಬನಿಂದ ರಚಿತವಾದುದೆಂದರೆ ಯಾರಾದರೂ–ಆಶ್ಚರ್ಯ ಪಡಬೇಕಾದದ್ದೇ ಸರಿ !

ಮಾನವಿ ತಾಲೂಕಿನ ಬಲ್ಲಟಗಿ ಗ್ರಾಮದಲ್ಲಿ 'ಶಾಮಸುಂದರ ವಿಠಲಾ'ಂಕಿತರಾದ ಗುಂಡಾಚಾರ್ಯರು ವರಕವಿಗಳಾಗಿದ್ದು ಮಾನವಿ ಜಗನ್ನಾಥದಾಸರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ಸ್ವಪ್ನದಲ್ಲಿಯೇ ಅವರಿಂದ ಅಂಕಿತ ಪಡೆದು ಸಹಸ್ರಾರು ದೇವರನಾಮಗಳನ್ನು, ಸುಳಾದಿ ಉಗಾಭೋಗಗಳನ್ನು 'ವೆಂಕಟೇಶ ಕಲ್ಯಾಣ' ವೆಂಬ ಬಯಲಾಟವನ್ನು ಅತ್ಯಂತ ಪ್ರೌಢ ಸಾಹಿತ್ಯದಲ್ಲಿ ರಚಿಸಿದ್ದಾರೆ. ಶಾಸ್ತ್ರಾಧ್ಯಯನ ಮಾಡಿದ ಪಂಡಿತರಿಗೂ ಸಹ ಇವರ ಪದಗಳೆಂದರೆ ಒಂದೊಂದುಸಲ ಕಬ್ಬಿಣದ ಕಡಲೆಯಂತಾಗುತ್ತವೆ. ಶಾಮಾಚಾರ್ಯ, ರಾಘಮ್ಮ ದಂಪತಿಗಳಲ್ಲಿ ಜನಿಸಿದ ಇವರು ಹೆಚ್ಚಾಗಿ ಕುರ್ಡಿ ಮಾನವಿಯಲ್ಲಿ ಕಾಲಕಳೆದು ತಮ್ಮ ಸಾಹಿತ್ಯ ಸೇವೆ ಸಲ್ಲಿಸಿದ್ದಾರೆ. ೧೯೭೩ ರಲ್ಲಿ ಇವರು ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿ, ಪರಮಾತ್ಮನಲ್ಲಿ ಸೇರಿದರು. ಒಮ್ಮೆ ಶಾಮಸುಂದರರು ಕಾವೇರಿರಂಗನಲ್ಲಿ ಹೋಗಿ—,"ನಿನ್ನನುಗ್ರಹ ಪೂರ್ಣ ಪಡೆದು ಧನ್ಯರೆನಿಸಿದ ಮಾನ್ಯ ಮಾನವಿ ಘನಗುರು ಜಗನ್ನಾಥ ದಾಸರ ಸನ್ನಿಧಾನದಿ ಸಂದೆ ತಂದೇ । ಕಾಯೋ ಕಾವೇರಿರಂಗ," ಎಂದು ಆರ್ತರಾಗಿ ಸ್ತೋತ್ರಗೈದಿದ್ದಾರೆ. ಹೀಗೆ ಹಲವಾರು ಪದಪದ್ಯಗಳನ್ನು ನಿಂತಲ್ಲಿ ಕುಳಿತಲ್ಲಿ ರಚಿಸಿ ಸಮಾಜದ ಅಂಕುಡೊಂಕುಗಳನ್ನು ತಿದ್ದಲು ಪ್ರಯತ್ನಿಸಿದ ಧೀಮಂತ ವರಕವಿಗಳು.

ಲಿಂಗಸೂರಿನಲ್ಲಿ ದಾಸಸಾಹಿತ್ಯದ ವಿಶ್ವವಿದ್ಯಾಲಯದುಂತಿರುವ ವರದೇಂದ್ರಸಾಹಿತ್ಯಮಂಡಲದ ಸಂಸ್ಥಾಪಕರಾದ ಗೋರೆಬಾಳ ಹನುಮಂತ ರಾಯರು ನಮ್ಮನಾಡಿನ ದಾ ಸ ಸಾ ಹಿ ತ್ಯ ದ ಸಂಗ್ರಹ, ಪ್ರಕಾಶನ ಕಾರ್ಯಗಳಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಮಹಾನುಭಾವರು. ಇವರು 'ಸುಂದರ ವಿಠಲ' ಅಂಕಿತದಿಂದ ಅನೇಕ ಪದ ಪದ್ಯಗಳನ್ನು ಸುಳಾದಿಗಳನ್ನು ರಚಿಸಿದ್ದಾರೆ. ಆದಿತ್ಯಪುರಾಣೋಕ್ತ ಶ್ರೀವೆಂಕಟೇಶ ಮಹಾತ್ಮ್ಯ ಎಂಬ ಸಂ ಸ್ಕೃ ತ ಗ್ರಂ ಥ ವ ನ್ನು ಹನ್ನೊಂದು ಸುಳಾದಿಗಳಲ್ಲಿ ಭಾಷಾಂತರಿಸಿದ್ದಾರೆ. ಅದರಲ್ಲಿ ಒಂದು ಸುಳಾದಿಜತೆ ಹೀಗಿದೆ.—

"ರಮೆಯು ಮಹಾನಂದಾಂಬುಧಿಯಲ್ಲಿ ಮುಳುಗಿ। ರಮಿಸುವಳಾರವೆ ವೈಕುಂಠಾದಿ ತ್ರಿಧಾಮದಿ ರಮಿಪಳು ನಿನ್ನಿಂದ ವೆಂಕಟಸುಂದರ ವಿಠಲ", ಎಂದು ವೆಂಕಟೇಶನನ್ನು ಸ್ತುತಿಸಿದ್ದಾರೆ. ೧೯೭೮ ರ ಇತ್ತೀಚಿಗೆ ಕಣ್ಮರೆಯಾದರೂ ಸಹ ಅವರು ಸಂಗ್ರಹಿಸಿದ ದಾಸಸಾಹಿತ್ಯ ಮಾತ್ರ ಇನ್ನೂ ಜೀವಂತವಾಗಿದೆ.

ಲಿಂಗಸಗೂರಿನ ಅಭಿನವಪ್ರಾಣೇಶವಿಠಲಾಂಕಿತರಾದ ವರದೇಂದ್ರ ಅರ್ಚಕ ಹ ನು ಮಂ ತ ರಾಯರು ವೃತ್ತಿಯಿಂದ ಶಾಲಾಉಪಾಧ್ಯಾಯರಾಗಿದ್ದರೂ ದಾಸಸಾಹಿತ್ಯರಚನೆಗೆ ತಮ್ಮ ಜೀವನವನ್ನೇ ಮುಡುಪಾಗಿಟ್ಟರು. ಇಪ್ಪತ್ತನೆಯ ಶತಮಾನದ ಹರಿದಾಸ ವಾಣಿಯ ಸೊಬಗನ್ನು ಅಭಿನವ ಪ್ರಾಣೇಶದಾಸರಲ್ಲಿ ನಾವು ಕಾಣಬಹುದಾಗಿದೆ. ಇವರು ನೂರು ಸುಳಾದಿ, ಹತ್ತು ಅಷ್ಟಕ ಸುಮಾರು ಇನ್ನೂರು ಕೀರ್ತನೆಗಳನ್ನು ರಚಿಸಿದ್ದಾರೆ 'ಮುಯ್ಯಕ್ಕೆಮುಯ್ಯ' ಎಂಬುದು ಪುರಂದರದಾಸರ ಕವನ ರೂಪಚರಿತ್ರೆ, ಸ್ಯಮಂತಕ ಮಣಿಕಥಾ, ಭಾಮಿನಿಷಟ್ಪದಿಯಲ್ಲಿ ರಚಿಸಿದ್ದಾರೆ.

"ಚಂದ್ರಕಶ್ಯಪಜನಾದ ನರಹರಿಯ ತೋರಿದ।
ಚಂದ್ರಸಭಾಕಂಬದ-ಹರಿಭಕ್ತಕುಮುದಕೆ।
ಚಂದ್ರನೆನಿಪ ಪ್ರಹ್ಲಾದಾನುಜಸಹ್ಲಾದ।".

ಎಂಬುದಾಗಿ ಜಗನ್ನಾಥದಾಸರನ್ನು ಕುರಿತು ಸ್ತೋತ್ರಗೈದಿದ್ದಾರೆ. ಇತ್ತೀಚಿನ ಹರಿದಾಸ ಪರಂಪರೆಯಲ್ಲಿ ಅಭಿನವ ಪ್ರಾಣೇಶದಾಸರ ಸಾಹಿತ್ಯ ಸೇವೆ ಅಮೋಘವಾಗಿದೆ. ಇವರು ೧೯೭೭ ರಲ್ಲಿ ವೈಕುಂಠ ವಾಸಿಗಳಾದರು.

ರಾಯಚೂರು ತಾಲೂಕಿನ ಕೂಡ್ಲೂರಗ್ರಾಮದಲ್ಲಿ ನರಸಿಂಹ ವಿಠಲಾಂಕಿತರಾದ ಕಲ್ಯಾಣಿ ಶ್ರೀನಿವಾಸಾಚಾರ್ಯರು ವೃತ್ತಿಯಲ್ಲಿ ವೈದ್ಯರಾಗಿದ್ದರೂ ಒಳ್ಳೇಶಾಸ್ತ್ರಸಂಪನ್ನರು; ಮೇಧಾವಿಗಳು. ಇವರು ನೂರಾರು ಪದಪದ್ಯಗಳನ್ನು ರಚಿಸಿದ್ದಾರೆ. ಹಿರಿಯ ದಾಸರ ಜಾಡನ್ನೇ ಅನುಸರಿಸಿದ ಇವರ ಕಾವ್ಯದಲ್ಲಿ ಭಕ್ತಿಭಾವ ತುಂಬಿ ತುಳುಕುತ್ತದೆ.

"ಭರದಿ ಸೂಸುವ ನದಿಯೋಳ್ಯೆಳ್ದನ।
ಕರಿವರದ ನರಸಿಂಹ ವಿಠಲನ ಸ್ಮರಿಸುತ
ಪುನರುದಿಸಿ ಗೋ ನದ ತರುವಿನೊಳ್
ಅಡಗಿರುವ ಗುರುಗಳ।

"ಶಿರಬಾಗಿನಮಿಸುವೆ ಜಿತಾಮಿತ್ರ-"

ರಾಯರಂದು ಸ್ತೋತ್ರಗೈದು ಅದೇ ಜಿತಾಮಿತ್ರ ಆರಾಧನೆಗೆಂದು ಒಮ್ಮೆ ಹೋದವರು ಅಲ್ಲಿಯೇ ವೈಕುಂಠವಾಸಿಗಳಾದರು.

ರಾಯಚೂರ ನಗರದಲ್ಲಿ 'ಪ ಾಂ ಡು ವಿ ಠ ಲಾಂಕಿತ" ರಾದ ಕಸ್ಬೆ ಪಾಂಡುರಂಗರಾಯರು ವೃ ತ್ತಿ ಯ ಲ್ಲಿ ಶಾನುಭೋಗರಾಗಿದ್ದರೂ — ಪ್ರವೃತ್ತಿಯಲ್ಲಿ ಒಳ್ಳೇ ರಾಜಕಾರಣಿಯಾಗಿದ್ದು ಉತ್ತಮ ವಾಗ್ಮಿಗಳಾಗಿದ್ದರು, ಉರ್ದು, ಫಾರ್ಸಿ ಅರಬ್ಬಿ ಭಾಷೆಗಳಲ್ಲಿ ಒಳ್ಳೇ ನಿಷ್ಣಾತರಾಗಿದ್ದರಲ್ಲದೆ ಲೌಕಿಕ ಪಾರಮಾರ್ಥಿಕ ಜ್ಞಾನವೆರಡರಲ್ಲಿಯೂ ಇವರನ್ನು ಸರಿದೂಗುವವರು ಇದ್ದಿಲ್ಲ. ಪ್ರಾಚೀನ ಕಾವ್ಯಗಳ ಜೊತೆಗೆ ದಾಸಸಾಹಿತ್ಯದ ಮೇಲೆ ಇವರಿಗೆ ಅಪಾರವಾದ ಪಾಂಡಿತ್ಯವಿತ್ತು. ಆಶು ಕವಿತ್ವದ ಶಕ್ತಿ ಇವರಲ್ಲಿತ್ತು. ಮಂತ್ರಾಲಯ ರಾಯರ ಸ್ತೋತ್ರವನ್ನು ಕನ್ನಡದಲ್ಲಿ ಅಶ್ವಧಾಟಿ ಭಾಮಿನಿಷಟ್ಪದಿಯಲ್ಲಿ ರಚಿಸಿದ್ದಾರೆ.

"ಗುರುರಾಘವೇಂದ್ರ ತವ ಚರಣಾರವಿಂದದ ಭ್ರಮರ ನೆನಿಸುವ ಮನುಜರ" ಎನ್ನುವ ಅಶ್ವಧಾಟಿಯ ಈ ಸ್ತೋತ್ರ ಪದ್ಯವು ಅತ್ಯಂತ ಜನಪ್ರಿಯವಾಗಿದೆ. ಇದರಂತೆ ಶ್ರೀ ಜಗನ್ನಾಥದಾಸರ ಚರಿತ್ರೆಯನ್ನೂ ಸಹ ಕಾವ್ಯರೂಪದಲ್ಲಿ ರಚಿಸಿ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿ ೧೯೭೮ ರಲ್ಲಿ ವೈಕುಂಠವಾಸಿಗಳಾದರು.

ದೇವದುರ್ಗ ತಾಲೂಕಿನ ಕೊಪ್ಪರಗ್ರಾಮದಲ್ಲಿ ಶ್ರೀನರಸಿಂಹದೇವರ ಅರ್ಚಕರಾದ ಗಿರಿಯಾಚಾರ್ಯರು 'ಕಾರ್ಪರ' ಅಂಕಿತನಾಮದಿಂದ ಒಂದುನೂರು ಇಪ್ಪತ್ತು ಪದಪದ್ಯಗಳನ್ನು ತಾರತಮ್ಯೋಕ್ತವಾಗಿ ರಚಿಸಿದ್ದಾರೆ. ಪ॥ ಯಳಮೇಲಿ ವಿಠಲಾಚಾರ್ಯರಲ್ಲಿ ಶಿಷ್ಯತ್ವ ವಹಿಸಿದ ಇವರು ತಮ್ಮ ಕಂಚಿನ ಕಂಠದಿಂದ ಭಾಗವತವನ್ನು ದಾಸಸಾಹಿತ್ಯದೊಡನೆ ಸಮನ್ವಯಗೊಳಿಸಿ ಮುಖೋದ್ಗತವಾಗಿ ಹೇಳುವ ಶೈಲಿ ಅಸದೃಶವಾಗಿತ್ತು. ಪಂ॥ ಭೀಮಸೇನಾಚಾರ್ಯರ ಪುತ್ರರಾದ ಗಿರಿಆಚಾರ್ಯರು ದಾಸಸಾಹಿತ್ಯದ ತಿರುಳನ್ನು ತಮ್ಮ ಪದ ಪದ್ಯಗಳ ಮೂಲಕ ಅರ್ಥೈಸಿದ್ದಾರೆ. ೧೯೭೯ ರಲ್ಲಿ ಇವರು ವೈಕುಂಠವಾಸಿಗಳಾದರು. "ರತಿ ಪತಿ ಪಿತನಿಗೆ ಪ್ರತಿಮೊಗಳೆನ್ನುತ। ಅತಿಥಿಗಳನು ಸಂತತ ಸ್ಮರಿಸುತ ಘನಸುಖವಂ ಪಡೆ ಇನಿಯನ ವಶದಿ", ಎಂಬುದಾಗಿ ಸ್ತ್ರೀಯರಿಗೆ ಪತಿಯೇ ಪರದೈವವೆಂದು ಸಾರಿಹೇಳಿದ್ದಾರೆ. ಭಕ್ತ್ಯೋದ್ರೇಕ ವಾಗು

---

## ಇರಬೇಕು

ಹಾಡಿದರೆ ರಾಮನಾಮ ಹಾಡಲೆ ಬೇಕು
ಕೇಳಿದರೆ ರಾಮನ ಕಥೆ ಕೇಳಲೆ ಬೇಕು
ಬಾಳಿದರೆ ರಾಮನಂತೆ ಬಾಳಲು ಬೇಕು
ರಾಮನಾಮವನ್ನು ಬಿಡದೆ ಜಪಿಸಲೆ ಬೇಕು

ಹೊಗಳಿದರೆ ರಾಮನನ್ನೆ ಹೊಗಳಲು ಬೇಕು
ತೆಗಳಿದರೆ ರಾಮನನ್ನೆ ತೆಗಳಲು ಬೇಕು
ಹೊಗಳಿ ತೆಗಳುವಾಗ ರಾಮ ಎನ್ನಲೇ ಬೇಕು
ಸದ್ಬುದ್ಧಿ ನೀಡುವಂತೆ ಬೇಡಲು ಬೇಕು

ಭ್ರಾತೃ ಭಕ್ತಿಯಲ್ಲಿ ಲಕ್ಷ್ಮಣನಂತೆ ಇರಲು ಬೇಕು
ಭರತನಂತೆ ನೀತಿಯಿಂದ ನಡೆಯಲು ಬೇಕು
ಸೇವೆಮಾಡುವಾಗ ಹನುಮನಂತಿರಬೇಕು
ಸೀತೆಯಂತೆ ಕಷ್ಟ ಸುಖವ ಸಹಿಸಲುಬೇಕು

ಶಬರಿಯಂತೆ ರಾಮನನ್ನೆ ಕಾಣಲು ಬೇಕು
ರಾಮಸೇವೆಯಲ್ಲಿ ಶಕ್ತಿ ಸವೆಸಲು ಬೇಕು
ಸತ್ಯದಿಂದ ಕಾರ್ಯ ಮಗ್ನರಾಗಲು ಬೇಕು
ಅಶಕ್ತರನ್ನು ಪ್ರೀತಿಯಿಂದ ಕಾಣಲು ಬೇಕು

ಭಕ್ತಿಯಿಂದ ರಾಮ ಭಜನೆ ಮಾಡಲೆ ಬೇಕು
ಮುಕ್ತಿ ನೀಡು ರಾಮ ಎಂದು ಬೇಡಲು ಬೇಕು
ವಾರ ವಾರ ಈ ಭಜನೆ ಸಾಗಲೇ ಬೇಕು
ಹರ್ಷದಿಂದ ಕಾಲಹರಣ ಮಾಡಲು ಬೇಕು

—ಹನುಮದಾಸ.

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನೆ | ಪ್ರಾ 8–00 | ಪ್ರಾ 8–30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ಮ 1–00 | ಸಂ 6–00 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

### ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | ,, | 40–00 |
| 3. | ಪುಳಿಯೋಗರೆ | ,, | 50–00 |
| 4. | ಪೊಂಗಲು | ,, | 55–00 |
| 5. | ಸಕ್ಕರೆಪೊಂಗಲ್ | ,, | 65–00 |
| 6. | ಶಾಕರ ಭಾತ್ | ,, | 85–00 |
| 7. | ಕೇಸರೀ ಫಾತ್ | ,, | 90–00 |
| 8. | ಸೀರ | ,, | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

ವಂಥ ಇವರ ಪದಗಳನ್ನು ಹಲವಾರು ಜನ ಬಹು ಭಕ್ತಿಯಿಂದ ಒಳ್ಳೇ ರಾಗಬದ್ಧವಾಗಿ ಹೇಳುತ್ತಾರೆ.

ಮಾನವಿ ತಾಲೂಕಿನ ಕಲ್ಲೂರ ಗ್ರಾಮದಲ್ಲಿ ಶ್ರೀ ಕರವಿಠಲಾಂಕಿತರಾದ ಜಗನ್ನಾಥಾಚಾರ್ಯರು ನಿವೃತ್ತ ಶಿಕ್ಷಕರಾಗಿದ್ದು ಕಲ್ಲೂರಿನ ಮಹಾಲಕ್ಷ್ಮೀ ಗುಡಿಯ ಅರ್ಚಕರ ವಂಶಕ್ಕೆ ಸೇರಿದವರು. ಇವರ ಪದಗಳಲ್ಲಿ ಹಿರಿಯ ದಾಸರ ಪ್ರಭಾವ ಎದ್ದು ಕಾಣುತ್ತದೆ. ತಾರತಮ್ಯೋಕ್ತವಾದ ನೂರಾರು ಪದಗಳನ್ನು ರಚಿಸಿ ಮಹಾಲಕ್ಷ್ಮಿಯ ಅಡಿದಾವರೆಗಳಲ್ಲಿ ಸಮರ್ಪಿಸಿದ್ದಾರೆ. "ಇಟ್ಟಿಕಲ್ಲಲಿ ನಿಂದನಾ । ಕಟಿಯಮೇಲ್ಕರ ವಿಟ್ಠಲನಾ । ಇಟ್ಟಕಸ್ತೂರಿ ತಿಲಕನಾ । ದಿಟ್ಟ ಶ್ರೀಕರವಿಠಲನಾ ।". ಎಂದು ಪುಂಡಲೀಕವರದ ಪಾಂಡುರಂಗನನ್ನು ಸ್ತೋತ್ರಗೈದಿದ್ದಾರೆ, ಇವರೂ ಸಹ ೧೯೭೯ ರಲ್ಲಿ ಹರಿಪುರವನ್ನು ಸೇರಿದರು.

ರಾಯಚೂರ ನಗರದಲ್ಲಿ ಶ್ರೀ ರಾಘವೇಂದ್ರ ಸಂಗೀತ ವಿದ್ಯಾಲಯದ ಸಂಸ್ಥಾಪಕರಾದ ಸಂಗೀತ ವಿದ್ವಾನ್ ಕಾಖಂಡಕಿ ಶ್ರೀನಿವಾಸಾಚಾರ್ಯರು 'ಹರಿಶ್ರೀನಿವಾಸ' ಎಂಬ ಅಂಕಿತ ನಾಮದಿಂದ ರಾಗ, ತಾಳ, ಲಯಕ್ಕೆ ತಕ್ಕಂತೆ ಸ್ವರಸಂಯೋಜನೆಯಿಂದ ನೂರಾರು ಭಕ್ತಿಗೀತೆಗಳನು ರಚಿಸಿ ಕೀರ್ತಿಶೇಷರಾಗಿದ್ದಾರೆ.

ಗಂಗಾವತಿ ತಾಲೂಕಿನ ನವಲಿ ಗ್ರಾಮವು ಆರ್ಥಿಕವಾಗಿ ಅತ್ಯಂತಹಿಂದುಳಿದಿದ್ದರೂ ಸಾಹಿತ್ಯದ ಕೃಷಿಯಲ್ಲಿ ಮಾತ್ರ ಹಿಂದುಳಿದಿಲ್ಲವೆಂದು ಹೇಳಬಹುದು. ನವಲಿ ಭೋಗಾಪುರೇಶ ಪ್ರಾಣದೇವರ ಅರ್ಚಕರಲ್ಲಿ—"ಭೋಗಾಪುರೇಶ" ಅಂಕಿತರಾದ ಪಂ॥ ರಾಘವೇಂದ್ರಾಚಾರ್ಯರು, 'ಗುರುಮಧ್ವ' ಅಂಕಿತರಾದ ಪಂ ॥ ಗುರುಮಧ್ವಾಚಾರ್ಯರು 'ರಾಘವೇಂದ್ರ' ಅಂಕಿತರಾದ ಶ್ರೀಭೋಗೇಶಾಚಾರ್ಯರು,– ಈ ಎಲ್ಲ ಮಹನೀಯರು ಹರಿದಾಸ ಸಾಹಿತ್ಯದ ರಚನೆ ಕೈಕೊಂಡು ಸಾವಿರಾರು ದೇವರನಾಮಗಳನ್ನು ರಚಿಸಿ ಜನಮನದಲ್ಲಿ ಭಕ್ತಿ ಭಾವವನ್ನು ಬಿಂಬಿಸಿದ್ದಾರೆ.

ಕುಂಟೋಜಿದಾಸರಿಂದ ಪ್ರಾರಂಭವಾದ ತೃತೀಯಘಟ್ಟದದಾಸ ಪರಂಪರೆಯಲ್ಲಿ ಬರುವ ಈ ಎಲ್ಲ ಹರಿದಾಸರು ಹಿಂದಲ ದಾಸ ಶ್ರೇಷ್ಠರ ದಿವ್ಯಪರಂಪರೆಯನ್ನೇ ಅನುಸರಿಸಿ ದಾಸಸಾಹಿತ್ಯದ ಭಂಡಾರವನ್ನು ತುಂಬಿ ತುಳುಕುವಂತೆ ಮಾಡಿದ್ದಾರೆ. ದಾಸರ ನೆಲೆವೀಡಾದ ರಾಯಚೂರು ಜಿಲ್ಲೆಯನ್ನು ಪಾವನಗೊಳಿಸಿ ಭಕ್ತಜನಕ್ಕೆ ಹರಿಭಕ್ತಿ ಸುಧೆಯನ್ನು ದಾನಮಾಡಿಸಿ ಕೃತಾರ್ಥರಾಗಿದ್ದಾರೆ.

ಎಲೆಯ ಮರೆಯಲ್ಲಿದ್ದು ತನ್ನ ಪರಿಮಳವನ್ನು ಬೀರುವ ಹೂವಿನಂತೆ ಸುಮಾರು ಅರವತ್ತಕ್ಕೂ ಮೇಲ್ಪಟ್ಟ ಜೀವಂತದಾಸರು ಇದೇ ರಾಯಚೂರು ಜಿಲ್ಲೆಯಲ್ಲಿದ್ದು ಯಾರಿಗೂ ಗೋಚರಿಸದೆ, ಭಕ್ತಿ ಗೀತೆಗಳನ್ನು ರಚಿಸುತ್ತ ದಾಸಸಾಹಿತ್ಯದ ಸೇವೆಯಲ್ಲಿ ನಿರತರಾಗಿದ್ದಾರೆ. ನಾಡಿನ ಹಿರಿಯರು ಸಾಹಿತ್ಯಾಭಿಮಾನಿಗಳು, ಇಂಥ ಜೀವಂತದಾಸರ ಸಾಹಿತ್ಯವನ್ನು ಸಹ, ಅವರು ಬದುಕಿರುವಾಗಲೇ ಬೆಳಕಿಗೆ ತಂದು ಗ್ರಂಥರೂಪದಲ್ಲಿ ಪ್ರಕಟಿಸುವುದು ಮುಖ್ಯಕರ್ತವ್ಯವಾಗಿದೆ.

ಒಟ್ಟಿನಲ್ಲಿ ರಾಯಚೂರು ಜಿಲ್ಲೆಯ ಹರಿದಾಸರು ಶ್ರೀ ಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿ ಕನ್ನಡ ಪದಪದ್ಯ ಉಗಾಭೋಗ, ಸುಳಾದಿ, ಲಾವಣಿ, ಗೀಗಿಪದ, ಅಷ್ಟಕ, ಹರಿಕಥೆ, ಬಯಲಾಟದ ಕಥೆ ಮುಂತಾದವುಗಳನ್ನು ರಚಿಸಿ ಸುಜನರ ಹೃನ್ಮನಗಳನ್ನು ತಣಿಸಿದ್ದಾರೆ. ತೃತೀಯ ಘಟ್ಟದ ದಾಸಸಾಹಿತ್ಯವಾದರೂ, ಒಂದು ಮತದ ಸ್ವತ್ತಲ್ಲ. ಅದು ಸಾರ್ವಕಾಲಿಕ, ಸಾರ್ವದೇಶಿಕ, ನೀತಿಧರ್ಮ ಜೀವನದ ಮೌಲ್ಯಗಳನ್ನು ಪ್ರತಿಬಿಂಬಿಸುವಂಥ ವಿಶ್ವಧರ್ಮದ ಸಂದೇಶ. ಶತಶತಮಾನಗಳ ಹಿಂದಿನ ದಾಸಶ್ರೇಷ್ಠರ ಜಾಡನ್ನೇ ಅನುಸರಿಸಿದ ರಾಯಚೂರು ಜಿಲ್ಲೆಯ ಇತ್ತೀಚಿನ ಹರಿದಾಸರು ಜನಬಳಕೆಯ ಭಾಷೆಯಲ್ಲಿ ತಮ್ಮ ಕಾವ್ಯದ ಹೊನಲನ್ನು ಹರಿಸಿ ಧನ್ಯರಾಗಿದ್ದಾರೆ. ಅವರು ಮಾಡಿದ ಉಪಕಾರ ಮೇರುವಿಗೆ ಸಮಾನ. ಈ ಎಲ್ಲ ಹರಿದಾಸರ ಸಾಹಿತ್ಯಾವಲೋಕನ ಗ್ರಂಥ ಪ್ರಕಾಶನ, ಕಾವ್ಯದ ಪ್ರಚಾರದಿಂದ ಮಾತ್ರ ಋಣಪರಿಹಾರ.



# ಕೃಷ್ಣದೇವರಾಯನ ಕಾಲದ ತೆಲುಗುಸಾಹಿತ್ಯ

ಡಾ॥ ಎನ್. ಅನಂತರಂಗಾಚಾರ್

ಕೃಷ್ಣದೇವರಾಯನು ಒಳ್ಳೆಯ ಕಲಾಭಿಜ್ಞ, ಶೂರ, ಸುಂದರಪುರುಷ, ದೃಢಕಾಯ, ಮಲ್ಲಯುದ್ಧಾದಿಗಳಲ್ಲಿ ಬಹಳ ಆಸಕ್ತ. ಸ್ವತಃ ಕವಿ ಮತ್ತು ಕವಿಜನಾಶ್ರಯ, ಇವನ ಮತಸಹಿಷ್ಣುತೆಯೂ ಮಾನವತೆಯಲ್ಲಿ ಇವನಿಗಿದ್ದ ಪ್ರೇಮವೂ ಇವನ ಆಸ್ಥಾನವನ್ನು 'ಭುವನವಿಜಯ' ವನ್ನಾಗಿ ಮಾಡಿದವು. ದಕ್ಷಿಣ ಭಾರತದ ಸಾಹಿತ್ಯಚರಿತ್ರೆಯಲ್ಲಿ ಇವನ ಆಳ್ವಿಕೆಯು ಸುವರ್ಣಾಕ್ಷರಗಳಲ್ಲಿ ಬರೆದಿಡತಕ್ಕದ್ದಾಗಿದೆ. ನಂದಿತಿಮ್ಮಯ್ಯನು ತನ್ನ 'ಪಾರಿಜಾತಾಪಹರಣ' ದಲ್ಲಿ ಇವನನ್ನು 'ಕವಿತಾ ಪ್ರಾವೀಣ್ಯಫಣೀಶ ಕೃಷ್ಣರಾಯಮಹೀಶ' ಎಂದು ಸಂಬೋಧಿಸಿದ್ದಾನೆ.

ಇವನು ಸ್ವತಃ ಸಂಸ್ಕೃತಾಂಧ್ರಕವಿ. ಇವನ ತೆಲುಗು ಕಾವ್ಯವಾದ 'ಆಮುಕ್ತಮಾಲ್ಯದ'ಎಂಬುದರ ಪೀಠಿಕಾಭಾಗದಿಂದ ಈತನು ಸಂಸ್ಕೃತದಲ್ಲಿ 'ಮದಾಲಸಾಚರಿತ್ರೆ', 'ಸತ್ಯಾವಧೂ ಪ್ರೀಣನಂ' 'ಸಕಲ ಕಥಾಸಾರಸಂಗ್ರಹಂ' 'ಸೂಕ್ತಿನೈಪುಣೀ ಜ್ಞಾನ ಚಿಂತಾಮಣಿ', 'ರಸಮಂಜರಿ' ಮೊದಲಾದ ಗ್ರಂಥಗಳನ್ನು ರಚಿಸಿರುವಂತೆ ತಿಳಿದು ಬರುತ್ತದೆ. ಆದರೆ ಇವು ಯಾವುವೂ ಉಪಲಬ್ಧವಿಲ್ಲ. 'ಜಾಂಬವತೀ ಕಲ್ಯಾಣ'ವೆಂಬ ಸಂಸ್ಕೃತ ನಾಟಕದ "ಸಮಾಪ್ತಮಿದಂ ರಾಜಾಧಿರಾಜ ರಾಜಪರಮೇಶ್ವರ ಸಕಲ ಕಲಾಭೋಜ ರಾಜವಿಭವ ಮೂರು ರಾಯರಗಂಡ ಶ್ರೀಮತ್ಕೃಷ್ಣರಾಜ ವಿರಚಿತಂ ಜಾಂಬವತೀ ಕಲ್ಯಾಣ ನಾಟಕಂ" ಎಂಬ ನಾಟಕಾಂತಗದ್ಯದಿಂದ ಕೃಷ್ಣದೇವರಾಯನೇ ಈ ಗ್ರಂಥವನ್ನು ರಚಿಸಿದವನೆಂದು ಊಹಿಸಬಹುದಾಗಿದೆ. ಇತರ ಎಷ್ಟೋ ಸಂಸ್ಕೃತ ಗ್ರಂಥಗಳಿಗೆ ಅವನು ಪೋಷಕನಾಗಿದ್ದಾನೆ.

ಕೃಷ್ಣದೇವರಾಯನ ಸಂಸ್ಕೃತ ಗ್ರಂಥಗಳಿಗಿಂತ ಅವನಿಗೆ ವಿಶೇಷವಾಗಿ ಕೀರ್ತಿ ತಂದಿರುವುದು ಅವನಿಂದ ಪ್ರೋತ್ಸಾಹಿತವಾದ ಆಂಧ್ರ ಸಾಹಿತ್ಯ ಪ್ರಪಂಚ. ಆತನಿಗೆ 'ಆಂಧ್ರಭೋಜ' ನೆಂಬ ಪ್ರಖ್ಯಾತ ಬಿರುದುಂಟು. ಕೃಷ್ಣದೇವರಾಯನೂ ಅವನ ಆಸ್ಥಾನಕವಿಗಳೂ ತೆಲುಗು ಸಾಹಿತ್ಯದಲ್ಲಿ 'ಪ್ರಬಂಧ ಮಾರ್ಗ'ವೆಂಬ ಒಂದು ಹೊಸ ಪಂಥವನ್ನು ಸ್ಥಾಪಿಸಿ ಅದನ್ನು ಸುಪುಷ್ಟವಾಗಿ ಬೆಳಸಿದರು. ಅವನ ಆಸ್ಥಾನದಲ್ಲಿ ಅನೇಕ ಆಂಧ್ರ ಕವಿಗಳಿದ್ದರು—ಅವರಲ್ಲಿ ಅಲ್ಲಸಾನಿ ಪೆದ್ದನ್ನ, ನಂದಿ ತಿಮ್ಮಣ್ಣ, ಅಯ್ಯಲರಾಜು ರಾಮಭದ್ರಯ್ಯ, ಧೂರ್ಜಟಿ, ಮಾದಯ್ಯಗಾರಿ ಮಲ್ಲನ್ನ, ಪಿಂಗಲಿ ಸೂರನ್ನ, ರಾಮರಾಜಭೂಷಣ, ತೆನಾಲಿ ರಾಮಕೃಷ್ಣ ಇವರು ಮುಖ್ಯರು. ಇವರು ಆಂಧ್ರಕವಿಗಳು, ಇವರಿಗೆ ಕೃಷ್ಣದೇವರಾಯನ ಆಸ್ಥಾನದ ಅಷ್ಟದಿಗ್ಗಜಗಳೆಂಬ ಬಿರುದಿರುವಂತೆ ತೋರುತ್ತದೆ. ಆದರೆ ಕೊನೆಯ ನಾಲ್ವರು ಕೃಷ್ಣದೇವರಾಯನ ಕಾಲದಲ್ಲಿರಲಿಲ್ಲವೆಂದು ನವೀನ ಸಂಶೋಧನೆಯಿಂದ ವ್ಯಕ್ತಪಡುತ್ತದೆ. ಕೃಷ್ಣದೇವರಾಯನು ತನ್ನ ಮತ್ತು ತನ್ನ ಆಸ್ಥಾನ ಕವಿಗಳ ಸಹಾಯದಿಂದ ಮೇಲೆ ತಿಳಿಸಿದ ಪ್ರಬಂಧ ಮಾರ್ಗವನ್ನು ರೂಢಮೂಲವಾಗಿಸಿದನು. ಸುಮಾರು ಹದಿನೈದನೆಯ ಶತಮಾನದವರೆಗಿನ ಆಂಧ್ರಸಾಹಿತ್ಯವೆಲ್ಲ ಸಂಸ್ಕೃತ ಪುರಾಣಗಳ ಭಾಷಾಂತರ ಮಾತ್ರವಾಗಿದ್ದುವು. ಪುರಾಣಗಳು ವಿಷಯಪ್ರಧಾನವಾಗಿದ್ದುದರಿಂದ ಕವಿ ತನ್ನ ಶಕ್ತಿಯನ್ನು ಸ್ವಾತಂತ್ರ್ಯವನ್ನು ಅಲ್ಲಿ ಪ್ರದರ್ಶಿಸಲು ಅವಕಾಶವಿರಲಿಲ್ಲ. ಆದುದರಿಂದ ಕವಿಯು ಕಲ್ಪನಾ ಕೌಶಲವನ್ನೂ ಪಾಂಡಿತ್ಯವನ್ನೂ ಪ್ರದರ್ಶಿಸುವುದಕ್ಕಾಗಿ ಕಲ್ಪನಾ ಪ್ರಧಾನವಾಗಿಯೂ ಅಲಂಕಾರಮಯವಾಗಿಯೂ ಇರುವ ಕಾವ್ಯ ಅಥವಾ ಪ್ರಬಂಧಮಾರ್ಗವು ಈ ಕಾಲದಲ್ಲಿ ಏರ್ಪಟ್ಟಿತು. ಈ ರೀತಿಯಲ್ಲಿ ರಚಿತವಾದ ಗ್ರಂಥಗಳಿಗೆ ಕೃಷ್ಣದೇವರಾಯಕೃತನಾದ 'ಆಮುಕ್ತಮಾಲ್ಯದ' ವೂ



ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿರುವ ಕೃಷ್ಣದೇವರಾಯ ಹಾಗೂ ಅವನ ಪತ್ನಿಯರ ವಿಗ್ರಹಗಳು.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.
# ವಿವಿಧ ಆರ್ಜಿತ ಉತ್ಸವಗಳ ಪರಿಷ್ಕೃತ ದರಗಳ ವಿವರಣೆ

### 1. ದರ್ಶನಗಳು

| | | |
|---|---|---|
| 1 | ವಿಶೇಷ ಪ್ರವೇಶ | ರೂ. 25 |

### 2. ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ | ರೂ. 200 |
| 2. | ಅಭಿಷೇಕ ( ಪುಲಿಕಾಪುಸೇವ) | ರೂ. 500 |
| 3. | ಗಂಬುರಗಿನ್ನೆ | ರೂ. 300 |
| 4. | ಪುನುಗುಗಿನ್ನೆ | ರೂ. 200 |
| 5. | ಜಾಫ್ರಾಗಿನ್ನೆ | ರೂ. 100 |
| 6. | ಕಸ್ತೂರಿಗಿನ್ನೆ | ರೂ. 100 |
| 7. | ಸಹಸ್ರಕಲಶಾಭಿಷೇಕ | ರೂ. 2500 |
| 8. | ತಿರುಪ್ಪಾವಡ | ರೂ. 5000 |
| 9. | ಕೋವಿಲ್ ಆಳ್ವಾರು ತಿರುಮಂಜನ | ರೂ. 1745 |
| 10. | ಐನಾ ಮಹಲಿನಲ್ಲಿನ ಡೋಲೋತ್ಸವ | ರೂ. 1000 |

### 3. ಉತ್ಸವಗಳು

| | | |
|---|---|---|
| 1. | ವಸಂತೋತ್ಸವ | ರೂ. 2500 |
| 2. | ಕಲ್ಯಾಣೋತ್ಸವ | ರೂ. 1500 |
| 3. | ಬ್ರಹ್ಮೋತ್ಸವ | ರೂ. 750 |

### 4. ವಾಹನಗಳು

1. ಸರ್ವಭೂಪಾಲವಾಹನ- ವಜ್ರಕವಚಸೇವೆ
   ಬಂಗಾರದ ಗರುಡ, ಕಲ್ಪವೃಕ್ಷ, ದೊಡ್ಡ ಶೇಷ
   ಸರ್ವಭೂಪಾಲ ಸೂರ್ಯಪ್ರಭ-ಒಂದೊಂದು ವಾಹನ
   ರೂ. 125
2. ಬೆಳ್ಳಿಯಗರುಡ, ಚಿಕ್ಕಶೇಷ, ಚಂದ್ರಪ್ರಭೆ,
   ಆನೆ, ಕುದುರೆ, ಹಂಸ, ಹನುಮಂತ
   ಒಂದೊಂದು ವಾಹನ ಸೇವೆ
   ರೂ. 100

ಮೂವರಿಗೆ ಮಾತ್ರ ಪ್ರವೇಶ.

### 5. ಅನ್ನಪ್ರಸಾದಗಳು (ಕಾಲಸೋಲ)

| | | |
|---|---|---|
| 1. | ದಧ್ಯೋದನ | ರೂ. 75 |
| 2. | ಪುಲಿಯೋಗರೆ (ಚಿತ್ರಾನ್ನ) | ರೂ. 75 |
| 3. | ಪೊಂಗಲ್ | ರೂ. 100 |
| 4. | ಸಕ್ಕರೆ ಪೊಂಗಲ್ | ರೂ. 100 |
| 5 | ಸಾಕರಬಾತ್ | ರೂ. 125 |
| 6. | ಕೇಸರಿಬಾತ್ | ರೂ. 125 |
| 7. | ಪಾಯಸ | ರೂ. 125 |
| 8. | ಶೀರಾ | ರೂ. 200 |

### 6 ಪಡಿ ಪ್ರಸಾದಗಳು

| | | |
|---|---|---|
| 1. | ಅಪ್ಪವು | ರೂ. 250 |
| 2. | ಲಾಡು | ರೂ. 600 |
| 3. | ವಡೆ | ರೂ. 350 |
| 4. | ಹೋಳಿ | ರೂ. 250 |
| 5. | ದೋಸೆ | ರೂ. 250 |
| 6. | ತೇನೆತೋಳ | ರೂ. 250 |
| 7. | ಸುಖಿಯವು | ರೂ. 250 |
| 8. | ಜಿಲೇಬಿ | ರೂ. 600 |

### 7. ನಿತ್ಯ ಸೇವೆಗಳು

| | | |
|---|---|---|
| 1. | ಕರ್ಪೂರ ಆರತಿ | ರೂ. 150 |
| 2. | ನವನೀತ ಆರತಿ | ರೂ. 400 |
| 3. | ಅರ್ಚನೆ | ರೂ. 200 |
| 1) | ಶಾಶ್ವತ ನಿತ್ಯ ಕರ್ಪೂರ ಆರತಿ | ರೂ. 3000 |
| 2) | ಶಾಶ್ವತ ನಿತ್ಯ ನವನೀತ ಆರತಿ | ರೂ. 8000 |
| 3) | ಶಾಶ್ವತ ನಿತ್ಯ ಅರ್ಚನೆ | ರೂ. 4000 |

**ಷರಾ :—**

(1) ಸಹಸ್ರ ಕಲಶಾಭಿಷೇಕ ಪ್ರತಿ ಬುಧವಾರ, ತಿರುಪ್ಪಾವಡ ಪ್ರತಿ ಗುರುವಾರ ಜರುಗುವುವು.

(2) ಆಮಂತ್ರಣೋತ್ಸವಕ್ಕೆ ಐವರಿಗೆ ಬದಲಾಗಿ ಇಬ್ಬರೇ ಅನುಮತಿಸಲ್ಪಡುವರು.

(3) ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್ ಸೇವೆ, ಮಂಗಳವಾರದಲ್ಲಿ ಪುಷ್ಪೋತ್ಸವ ಮಧ್ಯಾಹ್ನ 1 ಗಂಟೆ ರಾತ್ರಿ 8 ಗಂಟೆ ನಡುವೆ ಜರುಗುವುವು.

(4) ವಿಶೇಷ ಪ್ರವೇಶದ ಟಿಕೆಟ್ಟಿನವರು ಹಿಂದಿನಂತೆ ಧ್ವಜಸ್ತಂಭದ ಹತ್ತಿರವಲ್ಲದೆ ಮಹಾದ್ವಾರದ ಹತ್ತಿರ ಸರತಿಯ ಸಾಲಿನಲ್ಲಿ ಸೇರಿಸಲ್ಪಡುವರು.

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲ ತಿರುಪತಿ ದೇವಸ್ಥಾನ
**ತಿರುಪತಿ–517 501**

ಅಲ್ಲಸಾನಿ ಪೆದ್ದನ್ನ ಕೃತವಾದ 'ಮನುಚರಿತ್ರ'ವೂ ಮಾರ್ಗದರ್ಶಿಗಳು.

ಕೃಷ್ಣದೇವರಾಯನ ಹೆಸರನ್ನು ಶಾಶ್ವತಗೊಳಿಸಿರುವುದು ಅವನ ಆಂಧ್ರಗ್ರಂಥವಾದ 'ಆಮುಕ್ತ ಮಾಲ್ಯದ'. ಇದಕ್ಕೆ 'ವಿಷ್ಣುಚಿತ್ತೀಯ' ಎಂಬ ಮತ್ತೊಂದು ಹೆಸರೂ ಉಂಟು. ಇದರ ಕರ್ತೃತ್ವದ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಪೀಠಿಕಾ ಭಾಗದಲ್ಲಿ ಕೃಷ್ಣದೇವರಾಯನ ವಿಜಯಯಾತ್ರಾ ಪ್ರಕರಣದಲ್ಲಿ ಪೆದ್ದನ್ನನ ಕೈವಾಡವಿರುವಂತೆ ಕಂಡು ಬಂದರೂ ಆ ವಿಷಯದಲ್ಲಿ ಶಂಕೆ ಪಡಬೇಕಾದ ಕಾರಣವಿಲ್ಲ. ಕೃಷ್ಣದೇವರಾಯನ ಶೈಲಿ ಪೆಡಸು, ಬಳಸು, ಅಪೂರ್ವಪದ ಪ್ರಯೋಗಗಳು ಹೆಚ್ಚು. ಆದರೂ ಸ್ವಾಭಾವಿಕವಾದ ವರ್ಣನೆಗಳು ಚಿರ ಪರಿಚಿತವಾಗಿವೆ. ಭಾಗವತದ ಓಟ, ಸಂಪ್ರದಾಯ ಬದ್ಧವಾದ ವರ್ಣನೆ, ಧಾರ್ಮಿಕ ಮನೋಭಾವನೆ, ಶಾಂತವಾದ ಗ್ರಾಮಜೀವನ ಚಿತ್ರಣ, ಪವಿತ್ರ ವಾದ ವಾತಾವರಣಗಳು— ಇವುಗಳ ಅನುಭವಕ್ಕೆ 'ಆಮುಕ್ತಮಾಲ್ಯದ'ವನ್ನು ಓದಬೇಕು.

'ಆಮುಕ್ತಮಾಲ್ಯದ'ವು ಆಗ ತಾನೆ ರೂಢಿಗೆ ಬರುತ್ತಿದ್ದ ಕಾವ್ಯ ಶೈಲಿಯಲ್ಲಿ ರಚಿತವಾಗಿದೆ. ವಿಷ್ಣುಭಕ್ತರಾದ ಶ್ರೀವಿಲ್ಲಿಪುತ್ತೂರಿನ ಪೆರಿಯಾ ಳ್ವಾರ್‌ರವರ ಪುತ್ರಿಯಾದ ಆಂಡಾಳ್ ಅಥವಾ ಗೋದಾದೇವಿಯೆಂಬ ಭಕ್ತೆಗೂ ಶ್ರೀರಂಗನಾಥ ನಿಗೂ ನಡೆದ ವಿವಾಹವೇ ಇದರ ಮುಖ್ಯ ಕಥಾ ವಸ್ತು. ತಾನು ಕಳಿಂಗದೇಶದ ವಿಜಯ ಯಾತ್ರೆಗೆ ಹೋಗುತ್ತಾ ದಾರಿಯಲ್ಲಿ ಶ್ರೀಕಾಕುಳದ ಆಂಧ್ರ ಮಧುಸೂದನಸ್ವಾಮಿ ಯನ್ನು ದರ್ಶನಮಾಡುವುದಕ್ಕಾಗಿ ಹೋಗಿ ರಾತ್ರಿ ಅಲ್ಲಿ ತಂಗಿರಲು ದೇವರು ಸ್ವಪ್ನದಲ್ಲಿ ಬಂದು ಗೋದಾದೇವಿಯ ಚರಿತ್ರೆಯನ್ನು ದೇಶಭಾಷೆ ಯಲ್ಲೆಲ್ಲ ಉತ್ತಮವಾದ ತೆಲುಗು ಭಾಷೆಯಲ್ಲಿ ರಚಿಸೆಂದು ಆಜ್ಞೆಮಾಡಲು ತದನುಗುಣವಾಗಿ ತಾನು 'ಆಮುಕ್ತಮಾಲ್ಯದ'ವನ್ನು ರಚಿಸಿರುವಂತೆ ಕೃಷ್ಣದೇವರಾಯನೇ ಗ್ರಂಥಾರಂಭದಲ್ಲಿ ಹೇಳಿ ಕೊಂಡಿದ್ದಾನೆ. ಸ್ವಪ್ನದಲ್ಲಿ ಕಾಣಿಸಿಕೊಂಡ ದೇವರೂ ತೆಲುಗೇ ದೇಶಭಾಷೆಗಳಲ್ಲೆಲ್ಲ ಉತ್ತಮ ವಾದದೆಂದು ಹೇಳಿದರೆಂದು ಉಲ್ಲೇಖ ಮಾಡಿರುವು ದರಿಂದ ಆ ಭಾಷೆಯಲ್ಲಿ ಅವನಿಗೆ ಎಷ್ಟು ಅಭಿ ಮಾನವಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಗ್ರಂಥದ ಆಶ್ವಾಸಾಂತ್ಯಗದ್ಯಗಳು ಇತಿಹಾಸಗಳ ವಿಷಯಕವಾದ ಭಂಡಾರದಂತಿವೆ. ಇವುಗಳಲ್ಲಿ ಕವಿಯು ತನ್ನ ದಂಡಯಾತ್ರೆಗಳನ್ನೆಲ್ಲ ಕ್ರಮ ವಾಗಿ ವರ್ಣಿಸಿದ್ದಾನೆ. ದಕ್ಷಿಣಭಾರತದ ಐತಿಹಾ ಸಿಕ ಹಿನ್ನೆಲೆಯಲ್ಲಿ ಅನೇಕ ವೈಷ್ಣವಾಚಾರ ಪದ್ಧತಿ ಗಳು ಇಲ್ಲಿ ಚಿತ್ರಿತವಾಗಿವೆ. ನಾಲ್ಕನೆಯ ಸರ್ಗದಲ್ಲಿ ತನಗೆ ಅಭಿಮತವಾದ ರಾಜನೀತಿಯನ್ನು ವಿವರಿಸಿದ್ದಾನೆ—'ಆಮುಕ್ತಮಾಲ್ಯದ'ವು ತೆಲುಗು ಪಂಚ ಮಹಾಕಾವ್ಯಗಳಲ್ಲೊಂದಾಗಿ ಪರಿಗಣಿತವಾಗಿದೆ.

ಆಂಧ್ರ ಕವಿತಾಪ್ರಪಂಚದಲ್ಲಿ ಅಲ್ಲಸಾನಿ ಪೆದ್ದನ್ನನು ಕೃಷ್ಣದೇವರಾಯನ ಪ್ರಿಯಮಿತ್ರ. ಈತನೂ ರಾಜನಂತೆಯೇ ಶ್ರೀ ವೈಷ್ಣವರ ಶಿಷ್ಯ ನಾದುದರಿಂದ ಇವರ ಸಂಬಂಧವು ಬಲಪಟ್ಟಿರ ಬಹುದು. ಹಿಂದೆಯೇ ತಿಳಿಸಿರುವಂತೆ ಪೆದ್ದನ್ನನು ಪ್ರಬಂಧಮಾರ್ಗದ ಸ್ಥಾಪಕ. ಆದುದರಿಂದಲೇ ಅವನಿಗೆ 'ಆಂಧ್ರಕವಿತಾಪಿತಾಮಹ' ಎಂಬ ಪ್ರೌಢಿಮೆಯು ಅಕ್ಷರಶಃ ಸಲ್ಲುತ್ತದೆ. ಇವನು ತಾನು ರಚಿಸಿದ 'ಮನುಚರಿತ್ರೆ'ವನ್ನು ತನ್ನ ಪೋಷ ಕನಿಗೆ ಅಂಕಿತವಾಗಿ ಅರ್ಪಿಸಿದ್ದಾನೆ. ಇವನ ವಿಷಯಕವಾದ ಚಾಟು ಪದ್ಯಗಳನ್ನು ನಂಬುವು ದಾದರೆ ಕೃಷ್ಣದೇವರಾಯನು 'ಮನುಚರಿತ್ರ' ವನ್ನು ತನಗೆ ಸಮರ್ಪಣೆ ಮಾಡಿಸಿಕೊಳ್ಳುವ ಕಾಲದಲ್ಲಿ ಆ ಗ್ರಂಥವನ್ನು ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಮಾಡಿಸಿ ಸ್ವತಃ ಆ ಪಲ್ಲಕ್ಕಿಯನ್ನು ಹೊತ್ತು ರಾಜಸಭೆಯಲ್ಲಿ ಅದರ ಕರ್ತೃವಾದ ಪೆದ್ದನ್ನನಿಗೆ 'ಆಂಧ್ರ ಕವಿತಾಪಿತಾಮಹ' ಎಂಬ ಬಿರುದನ್ನು ಕೊಟ್ಟು ಅವನ ಕಾಲಿಗೆ ತನ್ನ ಕಯ್ಯಿಂ ದಲೇ ಪೆಂಡೆಯವನ್ನು ತೊಡಿಸಿದನು. ಅಲ್ಲದೇ ಪೆದ್ದನ್ನನೇ ತನ್ನ ಮನು ಚರಿತ್ರೆಯಲ್ಲಿ ಕೃಷ್ಣದೇವ ರಾಯನು ತಾನು ಕೇಳಿದೆಡೆಗಳಲ್ಲಿ ಅಗ್ರಹಾರ ದತ್ತಿಗಳನ್ನೂ ಕೊಡುತ್ತಿದ್ದನೆಂದು ಹೇಳಿಕೊಂಡಿದ್ದಾನೆ.

ಪೆದ್ದನ್ನನ 'ಮನುಚರಿತ್ರ'ಕ್ಕೆ 'ಸ್ವಾರೋಚಿಷ ಮನು ಸಂಭವಮ್'ಎಂಬ ಮತ್ತೊಂದು ಹೆಸರೂ ಉಂಟು. ಮಾರ್ಕಂಡೇಯ ಪುರಾಣಾಂತರ್ಗತ ವಾದ ಸ್ವಾರೋಚಿಷಮನುವಿನ ಜನನಕ್ಕೆ ಸಂಬಂಧ ಪಟ್ಟದು. ಪ್ರವರನೆಂಬ ವೈದಿಕ ಬ್ರಾಹ್ಮಣ ಯುವಕನು ಸಿದ್ಧಮುಖ್ಯನೊಬ್ಬನಿಂದ ದತ್ತವಾದ ದಿವ್ಯಮಂತ್ರ ಶಕ್ತಿಯ ಸಹಾಯದಿಂದ ಹಿಮಾಲಯಕ್ಕೆ ಹೋಗುತ್ತಾನೆ. ಅಲ್ಲಿ ಮಂಜಿನ ಮೇಲೆ ಓಡಾಡುತ್ತಿದ್ದಾಗ ಮಂತ್ರಶಕ್ತಿಯು ಮಾಯವಾಗಿ ತನ್ನ ನಿವಾಸಕ್ಕೆ ಹಿಂತಿರುಗುವುದಕ್ಕೆ ಅಶಕ್ತನಾಗುತ್ತಾನೆ. ಈ ಸಂಬಂಧದಲ್ಲಿ ವರೂ ಥಿನಿಯೆಂಬ ಅಪ್ಸರಕನ್ಯೆಯೊಬ್ಬಳು ಅವನನ್ನು ನೋಡಿ ಮೋಹಿತಳಾಗುತ್ತಾಳೆ. ಆದರೆ ಪ್ರವರನು ಸಂಯಮಿಯಾದುದರಿಂದ ಅವಳಲ್ಲಿ ಮನಸ್ಸು ಮಾಡದೆ ಅಗ್ನಿದೇವತೆಯ ಸಹಾಯದಿಂದ ತನ್ನ ಮನೆಯನ್ನು ಸೇರುವನು. ಇದೇ ವೇಳೆಯಲ್ಲಿ ಆ ಗಂಧರ್ವಕನ್ಯೆಯಲ್ಲಿ ಅನುರಕ್ತನಾಗಿ ಅವಳಿಂದ ತಿರಸ್ಕೃತನಾಗಿದ್ದ ಗಂಧರ್ವನೊಬ್ಬನು ಪ್ರವರನ ವಿಷಯವನ್ನರಿತು ಅವನ ಆಕಾರವನ್ನು ತಾಳಿ ಅವಳ ಪ್ರೇಮವನ್ನು ಪಡೆಯುವುದರಲ್ಲಿ ಜಯಶೀಲ ನಾಗುವನು. ಅವರಿಗೆ ಸ್ವಾರೋಚಿಷ ಮನುವಿನ ತಂದೆಯಾದ ಸ್ವರೋಚಿಷನು ಜನಿಸುವನು— 'ಕುಮಾರಸಂಭವ'ದಲ್ಲಿ ವಾಚಕರು ಹೇಗೆ ಕುಮಾ ರನ ಜನನಕ್ಕಿಂತ ಶಿವಪಾರ್ವತಿಯರ ಪ್ರಣಯ ಪ್ರಸಂಗದಲ್ಲಿ ಹೆಚ್ಚು ಆಸಕ್ತರಾಗುವರೋ ಹಾಗೆಯೇ ಇಲ್ಲಿಯೂ ಸ್ವಾರೋಚಿಷನ ಜನನ ಕ್ಕಿಂತ ಪ್ರವರ ವರೂಥಿನಿಯರ ಪ್ರಣಯದಲ್ಲಿ ಆಸಕ್ತರಾಗುವರು. ಈ ಎರಡು ಪಾತ್ರಗಳ ರಚನೆ ಗಾಗಿಯೇ ಪೆದ್ದನ್ನನಿಗೆ ವಿಶೇಷ ಪ್ರಶಸ್ತಿ ದೊರೆತಿರು ವುದು. ಕೃಷ್ಣದೇವರಾಯನು ಇದನ್ನು ಕಾವ್ಯರತ್ನ ವೆಂದು ಸ್ವೀಕರಿಸಿದನು. ಇದರ ಶೈಲಿಯು ಸರಳವೂ ಗಂಭೀರವೂ ಆಗಿದೆ. ರಸಚಿತ್ರಣ ಮತ್ತು ಭಾವನಾಕಲ್ಪನೆಗಳ ದೃಷ್ಟಿಯಿಂದ ಆಕಾಲದಲ್ಲಿ ಇದನ್ನು ಮೀರಿಸುವ ಗ್ರಂಥ ಮತ್ತೊಂದಿರಲಿಲ್ಲ.

ಕೃಷ್ಣದೇವರಾಯನ ಆಸ್ಥಾನ ಕವಿಗಳಲ್ಲಿ ಮತ್ತೊಬ್ಬನಾದ ನಂದಿ ತಿಮ್ಮಯ್ಯನು 'ಪಾರಿ ಜಾತಾಪಹರಣ'ವೆಂಬ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಪೋಷಕನಿಗೆ ಸಂಬಂಧಪಟ್ಟ ಅನೇಕ ಐತಿ ಹಾಸಿಕಾಂಶಗಳಿವೆ. ಈತನು 'ತ್ರಿಸ್ಥಲೀದಂಡಕ' ವೆಂಬ ಮತ್ತೊಂದು ಗ್ರಂಥವನ್ನೂ ರಚಿಸಿರುವಂತೆ ಕಾಣುತ್ತದೆ. ಆದರೆ ಅದು ಉಪಲಬ್ಧವಿಲ್ಲ. ಕೃಷ್ಣದೇವರಾಯನು ಇವನಿಗೆ ಅಗ್ರಹಾರ ದಾನಮಾಡಿದ್ದಾನೆ. ಕೃಷ್ಣದೇವನು ಭೋಜರಾಜನಂತೆ ವಸಂತೋತ್ಸವಕಾಲದಲ್ಲಿ ವಿದ್ವದ್ಗೋಷ್ಠಿಯನ್ನೇರ್ಪಡಿಸಿ ಸನ್ಮಾನಮಾಡು ತ್ತಿದ್ದನೆಂದೂ ತುಲಾಪುರುಷದಾನಮಾಡುತ್ತಿದ್ದ ನೆಂದೂ 'ಪಾರಿಜಾತಾಪಹರಣ' ದಲ್ಲಿ ಉಕ್ತವಾ ಗಿದೆ. 'ಪಾರಿಜಾತಾಪಹರಣ' ರಚನೆಯಲ್ಲಿ ತಿಮ್ಮಣ್ಣನು ಕನ್ನಡಕವಿಯಾದ ರುದ್ರಭಟ್ಟನಿಗೆ ಬಹುಮಟ್ಟಿಗೆ ಋಣಿಯಾಗಿದ್ದಾನೆ. ಆತನ 'ಜಗ ನ್ನಾಥವಿಜಯ'ದ ಛಾಯೆ ಈ ಗ್ರಂಥದಲ್ಲಿ ಅನೇಕ ಕಡೆ ಕಾಣುತ್ತದೆ. ತಿಮ್ಮಣ್ಣನು ತನ್ನ ಗ್ರಂಥದಲ್ಲಿ ಬರುವ ಸತ್ಯಭಾಮೆಯ ಪಾತ್ರಚಿತ್ರಣದಲ್ಲಿ ತನ್ನ ಸರ್ವಶಕ್ತಿಯನ್ನೂ ವಿನಿಯೋಗಿಸಿದ್ದಾನೆ. ವಸ್ತು ವನ್ನು 'ಹರಿವಂಶ'ದಿಂದ ಆರಿಸಿಕೊಂಡಿದ್ದರೂ ಸತ್ಯ ಭಾಮೆಯ ಪಾತ್ರದಲ್ಲಿ ವಾಚಕರಿಗೆ ಆತ್ಮೀಯತೆ ಯುಂಟಾಗಿರುವುದು ತಿಮ್ಮಣ್ಣನ ಪ್ರತಿಭಾ ವೈಶಿಷ್ಟ್ಯದಿಂದ. ಭಾಗವತದಲ್ಲಿ ರಾಧಾ ಪಾತ್ರ ನಿರ್ಮಾಣವು ಆಂಧ್ರರಿಗೆ ವಿಶೇಷ ರೀತಿಯಲ್ಲಿದೆ ಯೆಂದು ಕೆಲವರ ಮತ. ಸತ್ಯಳ ಪಾತ್ರನಿರ್ಮಾ ಣವೂ ಆಂಧ್ರರದೇ ಆಗಿರುವುದೂ ಇನ್ನೂ ವಿಶೇಷ. ರಾಧೆಯು ನಿಸ್ವಾರ್ಥ ಪ್ರೇಮಿ, ಅಸೂಯಾರಹಿ ತಳು. ರುಕ್ಮಿಣಿಯ ಪ್ರೇಮದಲ್ಲಿ ಮಹೋನ್ನತ ವಾದ ಭವ್ಯತೆಯಿದೆ, ದೈವತ್ವವಿದೆ. ಅವಳು ವಾಚಕರ ಒಳಕಣ್ಣಿಗೆ ಪವಿತ್ರಮೂರ್ತಿಯಂತೆ

ಭಾಸವಾಗುತ್ತಾಳೆ. ಪತಿಯ ದೌರ್ಬಲ್ಯವನ್ನೂ, ತನ್ನ ದೈವತ್ವವನ್ನೂ ಲೋಕಕ್ಷೇಮವನ್ನೂ ಅರಿತವಳು. ಸತ್ಯಳಾದರೋ ಸ್ವಾರ್ಥಿ, ಆತ್ಮಾಭಿಮಾನಿ, ಪತಿಯ ಪ್ರೇಮ ತನಗೇ ಮೀಸಲು, ಪರಸ್ಪರ್ಶಕೂಡ ಆಗದೆಂಬ ಅಸೂಯಾಪ್ರಕೃತಿಯವಳು. ಕಥೆಯ ಪ್ರಕಾರ ಕೃಷ್ಣನು ಒಂದುಸಲ ರುಕ್ಮಿಣಿಗೆ ಒಂದು ಪಾರಿಜಾತ ಪುಷ್ಪವನ್ನು ತಂದು ಕೊಡುವನು. ಈ ವಿಷಯವು ನಾರದಮುಖೇನ ಸತ್ಯಳಿಗೆ ತಿಳಿಯುವುದು. ಸರಿ; ಪ್ರೇಮಕಲಹ ಪ್ರಾರಂಭವಾಗುವುದು. ಅವಳನ್ನು ತೃಪ್ತಿ ಪಡಿಸುವುದಕ್ಕಾಗಿ ಕೃಷ್ಣನು ಅವಳ ಕಾಲಿಗೆ ಬಿದ್ದು ಪಾರಿಜಾತ ವೃಕ್ಷವನ್ನೇ ತರುವುದಾಗಿ ವಾಗ್ದಾನ ಮಾಡಿ ಇಂದ್ರನೊಡನೆ ಹೋರಾಡಿ ಆ ವೃಕ್ಷವನ್ನೇ ತಂದು ಅವಳ ಅಂತಃಪುರದ ಅಂಗಳದಲ್ಲಿ ಪ್ರತಿಷ್ಠಿಸುವನು. ಒಂದುಸಲ ಕೃಷ್ಣದೇವರಾಯನ ರಾಣಿಯೊಬ್ಬಳು ರಾಜನ ಕಡೆ ಕಾಲು ಚಾಚಿ ಮಲಗಲು ರಾಜನಿಗೆ ಕೋಪ ಬಂದಿತೆಂದೂ ಕ್ರುದ್ಧನಾದ ರಾಜನನ್ನು ಸಮಾಧಾನಮಾಡುವುದಕ್ಕಾಗಿ ಪುರಾಣದಲ್ಲಿಯೂ ಇಂತಹ ಪ್ರಸಂಗವುಂಟೆಂದು ತೋರಿಸಲು ಈ ಪ್ರಬಂಧವನ್ನು ರಚಿಸಬೇಕೆಂದು ರಾಣಿಯು ಕವಿಯನ್ನು ಕೇಳಿಕೊಂಡಳೆಂದೂ ಅದರಂತೆ ರಚಿತವಾದ ಈ ಪ್ರಬಂಧವನ್ನು ಕೇಳಿ ರಾಜನ ಆಗ್ರಹ ಪರಿಹಾರವಾಯಿತೆಂದೂ ಒಂದು ದಂತಕಥೆಯುಂಟು. ಆದರೆ ಅದಕ್ಕೆ ವಿಶೇಷ ಆಧಾರವಿಲ್ಲ. ಆದರೂ ಸತ್ಯಳ ಪಾತ್ರರಚನೆ ಬಹು ಆಕರ್ಷಕವಾಗಿದೆ. ತಿಮ್ಮಣ್ಣನ ಶೈಲಿ ಸುಲಭವೂ ಕೋಮಲವೂ, ಸುಸಂಸ್ಕೃತವೂ ಆಗಿದೆ. ತೆಲುಗು ಸಾಹಿತ್ಯದಲ್ಲಿ ಆತನ ಗ್ರಂಥಕ್ಕೆ ಉತ್ತಮ ಸ್ಥಾನವಿದೆ.

ರಾಜನ ಆಸ್ಥಾನ ಕವಿಗಳಲ್ಲಿ ಮತ್ತೊಬ್ಬನಾದ ಧೂರ್ಜಟಿಯು 'ಕಾಳಹಸ್ತಿ ಮಾಹಾತ್ಮ್ಯಮು' ಮತ್ತು 'ಕಾಳಹಸ್ತಿ ಶತಕಮು' ಎಂಬ ಎರಡು ಗ್ರಂಥಗಳನ್ನು ರಚಿಸಿದ್ದಾನೆ. ಶತಕಗಳು ಹೆಚ್ಚು ಭಾವನಾಮಯನಾಗಿವೆ. ಧೂರ್ಜಟಿಯು ವಿಶೇಷ ಧಾರ್ಮಿಕನಾದುದರಿಂದ ತನ್ನ ಕಾವ್ಯವನ್ನು ತನ್ನ ಆಶ್ರಯದಾತನಿಗೆ ಅಂಕಿತಮಾಡದೆ ಕಾಳಹಸ್ತೀಶ್ವರನಿಗೆ ಅರ್ಪಣೆಮಾಡಿದನು. ಆತನ ಮೊಮ್ಮಗನಾದ ಮತ್ತೊಬ್ಬ ಧೂರ್ಜಟಿಯು 'ಕೃಷ್ಣದೇವ ರಾಯ ವಿಜಯಮು' ಎಂಬ ಐತಿಹಾಸಿಕ ಕಾವ್ಯವನ್ನೂ ರಚಿಸಿ ರಾಜನಿಗೆ ಅಂಕಿತಮಾಡಿದನು.

ಅಯ್ಯಲರಾಜು ರಾಮಭದ್ರಕವಿ 'ಸಕಲ ಮತ ಸಾರಸಂಗ್ರಮು' ಮತ್ತು 'ರಾಮಾಭ್ಯುದಯಮು' ಎಂಬ ಎರಡು ಗ್ರಂಥಗಳನ್ನು ರಚಿಸಿದ್ದಾನೆ. ಕಂದುಕೂರು ರುದ್ರಕವಿಯು ಕೃಷ್ಣನ ಆಸ್ಥಾನದಲ್ಲಿ ೧೨ ವರ್ಷಗಳ ಕಾಲವಿದ್ದು 'ನಿರಂಕುಶೋಪಾಖ್ಯಾನಮು' ಎಂಬ ಉತ್ತಮ ಪ್ರಬಂಧ ಕಾವ್ಯವನ್ನೂ 'ಸುಗ್ರೀವ ವಿಜಯ' ವೆಂಬ ಯಕ್ಷಗಾನವನ್ನೂ 'ಹರಿಶತಕ'ವೆಂಬ ಶತಕಗ್ರಂಥವನ್ನೂ ರಚಿಸಿದ್ದಾನೆ. ತಿರುಪತಿಯ ದೇವಸ್ಥಾನದ ಸಂಕೀರ್ತನಾಚಾರ್ಯರ ವಂಶಕ್ಕೆ ಸೇರಿದ ತಾಳ್ಳಪಾಕಂ ಪೆದ್ದ ತಿರುಮಲಯ್ಯನೆಂಬುವನು ಶ್ರೀ ವೆಂಕಟೇಶ್ವರನನ್ನು ಕುರಿತು ಅನೇಕ ಸಂಕೀರ್ತನೆಗಳನ್ನು 'ಹರಿವಂಶ'ವೆಂಬ ದ್ವಿಪದ ಗ್ರಂಥವನ್ನೂ 'ಶೃಂಗಾರಶತಕ', ಭಗವದ್ಗೀತೆಯ ಪ್ರಥಮ ತೆಲುಗು ವ್ಯಾಖ್ಯಾನ, 'ನೀತಿಸೀಸ ಪದ್ಯಶತಕ', 'ವೆಂಕಟೇಶ್ವರೋದಾಹರಣಂ' ಮೊದಲಾದುವುಗಳನ್ನು ರಚಿಸಿದ್ದಾನೆ. ಅವನ ಕೃತಿಗಳೆಲ್ಲ ಅತ್ಯಂತ ಉತ್ತಮವಾದದ್ದು 'ಶ್ರೀವೆಂಕಟೇಶ್ವರ ವಚನಮುಲು'. ತಾಳ್ಳಪಾಕಂ ಚಿನ್ನಣ್ಣನು ಈತನ ಮಗ. ಈತನಹೆಸರು ಚಿನ್ನವೆಂಗಳನಾಥ'. ಈತನು ದ್ವಿಪದಕ್ಕೆಲಿಗೆ ಎತ್ತಿದ ಕೈ. 'ಪರಮಯೋಗಿ ವಿಲಾಸಮು' 'ಅಷ್ಟಮಹಿಷೀಕಲ್ಯಾಣಮು' ಎಂಬ ಗ್ರಂಥಗಳ ಕರ್ತೃ. ಪೋತನಾರು ಆಸ್ಥಾನಕವಿಯಾಗಿದ್ದ ಚಿಂತಲಪುರಿ ಎಲ್ಲಕವಿ ಕೃಷ್ಣದೇವರಾಯನು ಆ ರಾಜ್ಯವನ್ನು ಗೆದ್ದು ಜಯಸ್ತಂಭವನ್ನು ಸ್ಥಾಪಿಸಿದಮೇಲೆ ಕೃಷ್ಣದೇವರಾಯನ ಆಸ್ಥಾನದಲ್ಲಿ ಬಂದು ನೆಲಸಿದನು. ಈತನ 'ರಾಧಾಮಾಧವಂ'ಎಂಬ ಗ್ರಂಥವನ್ನು ಕೃಷ್ಣನು ಪರೀಕ್ಷಿಸಿ ಬಹುತೃಪ್ತಿಪಟ್ಟು ಅವನಿಗೆ ಅದೇ ಬಿರುದನ್ನು ಕೊಟ್ಟನು. ಕೃಷ್ಣದೇವರಾಯನು ತೀರಿಹೋದ ಮೇಲೆಯೂ ಈತನು ಜೀವಂತನಾಗಿದ್ದು 'ವಿಷ್ಣುಮಾಯ ನಾಟಕಂ' 'ತಾರಾಬ್ರಹ್ಮರಾಜೀಯಮು' ಎಂಬುವುಗಳನ್ನು ಬರೆದು ಅವುಗಳಲ್ಲಿ ಎರಡನೆಯದನ್ನು ಅಚ್ಯುತರಾಯನ ಸೈನ್ಯಾಧಿಕಾರಿಯಾಗಿದ್ದ ನಂಜತಿಮ್ಮರಸುವಿಗೆ ಅಂಕಿತಮಾಡಿದನು. ವಲ್ಲಭಾಚಾರ್ಯನೆಂದು ಪ್ರಸಿದ್ಧನಾದ ಕವಿ ದೇವೇಂದ್ರನು ಭಾಸ್ಕರಾಚಾರ್ಯರ 'ಲೀಲಾವತಿ' ಯನ್ನು ಇದೇ ಕಾಲದಲ್ಲಿ ತೆಲುಗಿಗೆಭಾಷಾಂತರಿಸಿ ಬೊಮ್ಮಲತ–ಕಾಳನೆಂಬವನಿಗೆ ಅಂಕಿತಮಾಡಿದನು. ರಾಮಾಯಣದ ಕರ್ತೃವಾದ ಕುಮಾರಮಲ್ಲಮ್ಮ ಎಂಬುವಳು ಕೃಷ್ಣದೇವರಾಯನಿಂದ ಗೌರವಿಸಲ್ಪಟ್ಟ ಕವಯಿತ್ರಿ. 'ಕುಮಾರನೈಷದಂ' ಮಲ್ಲಣಚಾರಿತ್ರಂ' ಮೊದಲಾದುವುಗಳ ಕರ್ತೃವಾದ ಪೆದಪಾಟಿ ಯರ್ರಣ್ಣನೂ, 'ಕವಿಕರ್ಣರಸಾಯನ'ದ ಕರ್ತೃವಾದ ಸಂಕುಸಾಲೆ ನರಸಿಂಹಕವಿಯೂ ಕೃಷ್ಣದೇವ ರಾಯನ ಪ್ರತ್ಯಕ್ಷ ಆಶ್ರಯದಲ್ಲಿದ್ದವರು.

ಕೃಷ್ಣದೇವರಾಯನ ಆಶ್ರಯದಲ್ಲಿದ್ದ ಅವನ ಅನೇಕ ಅಧಿಕಾರಿಗಳೂ ಸಾಮಂತರೂ ಆಂಧ್ರ ಸಾಹಿತ್ಯದ ಬೆಳವಣಿಗೆ ವಿಶೇಷ ಪ್ರೋತ್ಸಾಹವಿತ್ತಿದ್ದಾರೆ. ಕೃಷ್ಣದೇವರಾಯನ ಪ್ರಧಾನನಾದ ಸಾಳುವತಿಮ್ಮನು ಅಗಸ್ತ್ಯನ 'ಚಂಪೂಭಾರತ'ಕ್ಕೆ 'ಬಾಲಭಾರತಿ' ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ಈತನ ಅಳಿಯಂದಿರಾದ ನಾದೆಂಡ್ಲ ಅಪ್ಪ ಮತ್ತು ನಾದೆಂಡ್ಲ ಗೋಪ ಎಂಬುವರು ಸ್ವತಃ ಕವಿಗಳೂ ಕವಿಜನಾಶ್ರಯರೂ ಆಗಿದ್ದರು. ಮಾದಯ್ಯಗಾರಿ ಮಲ್ಲನ್ನನು 'ರಾಜಶೇಖರ ಚರಿತಮು' ಎಂಬ ಗ್ರಂಥವನ್ನು ರಚಿಸಿ ಅಪ್ಪನಿಗೆ ಅಂಕಿತಮಾಡಿದ್ದಾನೆ. ಈತನು 'ಮೃಗೇಂದ್ರಾಗಮು'ಕ್ಕೆ ವ್ಯಾಖ್ಯಾನವನ್ನು ರಚಿಸಿದ ಭಾಷಾಮಠದ ಅಘೋರ ಶಿವನ ಶಿಷ್ಯ. ಅಪ್ಪನ ತಮ್ಮನಾದ ಗೋಪನು ಕೃಷ್ಣಮಿಶ್ರನ 'ಪ್ರಬೋಧ ಚಂದ್ರೋದಯಕ್ಕೆ 'ಚಂದ್ರಿಕೆ'ಯೆಂಬ ವ್ಯಾಖ್ಯಾನವನ್ನು ರಚಿಸಿದನು. ದ್ವಿಪದ ಛಂದಸ್ಸಿನಲ್ಲಿ ರಚಿತವಾಗಿರುವ ಕೃಷ್ಣಾರ್ಜುನ ಸಂವಾದವೂ ಈತನಿಂದಲೇ ರಚಿತವಾದುದು. ಬಂದಂ ಲಕ್ಷ್ಮೀನಾರಾಯಣನೆಂಬುವನು ಕೃಷ್ಣದೇವರಾಯನ ಅಂಕಿತದಲ್ಲಿ 'ಸಂಗೀತಸೂರ್ಯೋದಯ'ವೆಂಬ ಗ್ರಂಥವನ್ನು ರಚಿಸಿದ್ದಾನೆ. ಈತನು ಕೃಷ್ಣದೇವರಾಯನ ನಾಟ್ಯಾಚಾರ್ಯ. ಈತನಿಗೆ ಅಭಿನವ ಭರತಾಚಾರ್ಯ' 'ರಾಯಬಾಯತ' 'ಸೂಕ್ಷ್ಮಭರತಾಚಾರ್ಯ' ಎಂಬ ಬಿರುದುಗಳಿದ್ದುವು.

ಕೃಷ್ಣದೇವರಾಯನ ಆಸ್ಥಾನದ ಅಷ್ಟದಿಗ್ಗಜಗಳೆಂದು ಪ್ರಸಿದ್ಧರಾಗಿ ಅವನ ಕಾಲದಲ್ಲಿದ್ದವರಲ್ಲಿ ಒಬ್ಬನೆಂದು ಈಚೆಗೆ ನಿಷ್ಕೃಷ್ಟವಾಗಿರುವ ಮಾದಯ್ಯಗಾರಿಮಲ್ಲನ್ನ ಪಿಂಗಳಿ ಸೂರನ್ನ, ರಾಮರಾಜಭೂಷಣ ಮತ್ತು ತೆನ್ನಾಲಿ ರಾಮಕೃಷ್ಣ ಇವರು ವಿಜಯನಗರದ ಮುಂದಿನ ರಾಜರುಗಳ ಆಶ್ರಯದಲ್ಲಿ ಅನೇಕ ಶ್ರೇಷ್ಠ ಆಂಧ್ರ ಗ್ರಂಥಗಳನ್ನು ರಚಿಸಿ ಕೃಷ್ಣದೇವರಾಯನ ಕಾರ್ಯವನ್ನು ಮುಂದುವರಿಸಿದ್ದಾರೆ.

ಈವರೆಗಿನ ಒಂದು ಹಕ್ಕಿನೋಟದಿಂದ ಕೃಷ್ಣದೇವರಾಯನ ಕಾಲವು ತೆಲುಗು ಸಾಹಿತ್ಯದ ಸುವರ್ಣ ಯುಗವೆಂಬುದನ್ನು ಖಚಿತವಾಗಿ ನಿಷ್ಕರ್ಷಿಸುತ್ತದೆ.

★

# ಅನ್ನಮಯ್ಯ ವಿವರಿಸಿದ ಜಾತಿ

—ಡಾ || ಕೆ. ಸರ್ವೋತ್ತಮನ್

ಜಾತಿ ಎಂಬ ಶಬ್ದಕ್ಕೆ 'ಹುಟ್ಟು, ಜನನ, ಬ್ರಾಹ್ಮಣ ಮೊದಲಾದ ಚತುರ್ವರ್ಣಗಳು, ಹುಟ್ಟಿದ ಕುಲ, ರೀತಿ, ಗುಂಪು, ಸಮಾನತೆ' ಎನ್ನುವ ಅನೇಕ ಅರ್ಥಗಳು ನಿಘಂಟುಗಳಲ್ಲಿ ದೊರಕುವುವು. ಈ ವ್ಯಾಸದಲ್ಲಿ ಅನ್ನಮಯ್ಯನ ಜನ್ಮವನ್ನು ಕುರಿತು ವಿಚಾರಮಾಡುವುದಿಲ್ಲ. ಅನ್ನಮಯ್ಯನು ಸ್ಮಾರ್ತಬ್ರಾಹ್ಮಣ ವಂಶದಲ್ಲಿ ನಂದವರೀಕ ಶಾಖೆಯಲ್ಲಿ ಹುಟ್ಟಿ, ಘನವಿಷ್ಣು ಕೃಪೆಯಿಂದ ವೈಷ್ಣವಧರ್ಮ ಸ್ವೀಕಾರಮಾಡಿ, ದಿನಕ್ಕೆ ಒಂದು ಕೀರ್ತನೆಯಂತೆ 32,000 ಪದಗಳನ್ನು ಹಾಡಿದ ಅಂಶಗಳು ಇಲ್ಲಿ ಅಪ್ರಸ್ತುತ. ಅನ್ನಮಯ್ಯ ಹರಿದಾಸರ ಜಾತಿಗೆ ಸೇರಿದ ಭಕ್ತಶಿಖಾಮಣಿ. ಆ ಪದಕವಿತಾ ಪಿತಾಮಹನು ತನ್ನ ಕೀರ್ತನೆಗಳಲ್ಲಿ ಪ್ರತಿಪಾದಿಸಿದ ಜಾತಿವಿಶೇಷವನ್ನು ಪರಿಶೀಲನೆ ಮಾಡುವುದೇ ಈ ವ್ಯಾಸದ ಉದ್ದೇಶ.

ಪ್ರಕೃತಿ ದೃಷ್ಟಾಂತಗಳಿಂದ ಲೌಕಿಕ ಜಾತಿ ಭೇದವನ್ನು ವಿಮರ್ಶೆಮಾಡುವುದು ಅನ್ನಮಯ್ಯನ ಪದ್ಧತಿಗಳಲ್ಲಿ ಒಂದು. ಅನ್ನಮಯ್ಯ ಒಂದು ಪದದಲ್ಲಿ;

'ತಲಮೇಲ ಕುಲಮೇಲ ತಪಮೇ ಕಾರಣಮು
ಎಲಮಿ ಹರಿದಾಸುಲು ಏ ಜಾತಿಯೈನ ನೇಮಿ
(?.293)

ಎಂದು ಜಾತಿಗಳನ್ನು ತಿರಸ್ಕರಿಸುತ್ತಾನೆ. ಅದೇ ಪದದಲ್ಲಿ ಹಲವಾರು ದೃಷ್ಟಾಂತಗಳನ್ನು ಹೇಳುತ್ತಾನೆ. "ಕಾಗೆಯಿಂದ ಅಶ್ವತ್ಥವೃಕ್ಷ ಹುಟ್ಟಿತು. ಕಲ್ಲುಗಳ ರಾಶಿಯಲ್ಲಿ ಮುತ್ತು ಉತ್ಪನ್ನವಾಯಿತು. ಬೆಕ್ಕಿನ ಮೈಯಲ್ಲಿ ಹುಟ್ಟುತ್ತದೆ ಪುನುಗು, ಕೆಸರಿನಲ್ಲಿ ಹುಟ್ಟುತ್ತದೆ ಪದ್ಮ, ಕೀಟಕಗಳಿಂದ ಹುಟ್ಟುತ್ತದೆ ಬಣ್ಣದ ಅಥವಾ ರೇಷ್ಮೆಯ ವಸ್ತ್ರ. ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸೇವಿಸುವ ದಾಸರು ಎಲ್ಲಿ ಹುಟ್ಟಿದರೇನು ? ಮೇಲೆ ಹೇಳಿದ ಕೀರ್ತನೆಯಲ್ಲಿ ಕಾಣುವ ದೃಷ್ಟಾಂತಗಳು ಸರ್ವಕಾಲ ಸರ್ವಾವಸ್ಥೆಗಳಲ್ಲಿ ಸಮಾನವಾಗಿರುತ್ತವೆ. ಆದ್ದರಿಂದ ಲೌಕಿಕಜಾತಿ ವಿಭಾಗವು ಕೃತಕವೆಂದು, ಪ್ರಕೃತಿದೃಷ್ಟಿಯಲ್ಲಿ ಎಲ್ಲರೂ ಸಮಾನರೆಂದು ಅನ್ನಮಯ್ಯ ಹೇಳುತ್ತಾನೆ. ಇದೇ ಅಭಿಪ್ರಾಯವನ್ನು ಕನಕದಾಸರು ವ್ಯಕ್ತಮಾಡುವ ವಿಧಾನವನ್ನು ನೋಡೋಣ—

"ಕುಲ ಕುಲವೆನ್ನುತಿಹಿರಿ
ಕುಲವಾವುದು ಸತ್ಯ ಸುಜನರಿಗೆ ?
ಕೆಸರೊಳು ತಾವರೆ ಪುಟ್ಟಲು ಅದ ತಂದು
ಕುಸುಮನಾಭನಿಗೆ ಅರ್ಪಿಸರೇನಯ್ಯ
ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ
ವಸುಧೆಯೊಳಗೆ ಭೂಸುರರುಣ್ಣರೇನಯ್ಯ"

ಹಿಂದಿನಿಂದ ಬಂದುದರ ದೋಷದೌರ್ಬಲ್ಯಗಳನ್ನು ತಿಳಿದು ಕಾರಣಗಳನ್ನು ಹೇಳಿ ಸಮಾಜವನ್ನು ತಿದ್ದಿ ಸುಧಾರಣೆ ಮಾಡುವುದು ಇವರ ಉದ್ದೇಶ. ಪುರಂದರದಾಸರೂ ಕುಲವಿಭಾಗವನ್ನು ಕನಕದಾಸರ ಹಾಗೆಯೇ ತಿರಸ್ಕರಿಸುತ್ತಾರೆ.

"ಆವ ಕುಲವಾದರೇನು ಆವನಾದರೇನು
ಆತ್ಮಭಾವವರಿತ ಮೇಲೆ
ಹಸಿಕಬ್ಬು ಡೊಂಕಿರಲು—ಅದರ
ರಸ ಡೊಂಕೇನೊ
ವಿಷಯಾಸೆಗಳನೆ ಬಿಟ್ಟು
ಹಸನಾದ ಗುರುಭಕ್ತಿ ಮಾಡೊ
ನಾನಾ ವರ್ಣದ ಆಕಳು — ಅದು
ನಾನಾವರ್ಣದ ಕ್ಷೀರವೇನೊ
ಹೀನ ಕರ್ಮಗಳನು ಬಿಟ್ಟು—ಹಿಗ್ಗಿ
ಜ್ಞಾನ ಒಲಿಸಿರೊ
ಕುಲದ ಮೇಲೆ ಹೋಗಬೇಡ—ಮನುಜ



ಕುಲವಿಲ್ಲ ಜ್ಞಾನಿಗಳಿಗೆ
ವರದ ಪುರಂದರ ವಿಠಲನ
ಪದವ ಸೇರಿ ಮುಕ್ತನಾಗೊ

ಪುರಾಣೇತಿಹಾಸಗಳ ಕಥೆಗಳನ್ನು ಉದಾಹರಿಸಿ ಜಾತಿಗೆ ಪ್ರಾಧಾನ್ಯವಿಲ್ಲವೆಂದು ಹೇಳುವುದು ಅನ್ನಮಯ್ಯನ ಮತ್ತೊಂದು ಪದ್ಧತಿ. ಪುರಾಣವೆಂದರೆ ಗತಚರಿತ್ರೆ ಎಂದು ಅರ್ಥ. ಗತಚರಿತ್ರೆ ವರ್ತಮಾನಕ್ಕೆ ದಾರಿ ತೋರಿಸುತ್ತದೆ. ಕಥೆಗಳ ರೂಪದ ಮೂಲಕ ಸತ್ಯಸ್ಥಾಪನೆ ಮಾಡುವುದು ಪ್ರಾಚೀನರ ಸಂಪ್ರದಾಯ.

ನೀಜಾತುಲನ್ನಿಯು ವೃಥಾ ವೃಥಾ
ಅಜಾಮಿಳಾದುಲಕದಿಯೇ ಜಾತಿ
ಜಾತಿ ಭೇದಮುಲು ಶರೀರಗುಣಮುಲು
ಜಾತಿ ಶರೀರಮು ತೋಡನೇ ಚೆಡು
ಆತುಮ ಪರಿಶುದ್ಧಂಬೆಪ್ಪುಡುನು 7–14೪

ಶರೀರ ಹೋದರೆ ಜಾತಿಯೂ ಹೋಗುತ್ತದೆ, ಆತ್ಮ ಪರಿಶುದ್ಧವಾದದ್ದು. ಅಜಾಮಿಳನು ನಾರಾಯಣ ಸ್ಮರಣೆಮಾಡಿ ಮುಕ್ತಿಹೊಂದಿದವನು. ಕನಕದಾಸರು ಮುಕ್ತಿಗೆ ಜಾತಿ ಪ್ರತಿಬಂಧಕವಿಲ್ಲವೆಂದು, ಭಕ್ತಿಮುಖ್ಯವೆಂದು ಹೀಗೆ ಹೇಳುತ್ತಾರೆ.

"ಆ ಶಾಂಡಿಲ್ಯ ಪರಾಶರ ಎನಿಪನು
ವೇಶ್ಯೆಯ ಪುತ್ರ ವಸಿಷ್ಠಮುನಿ
ದಾಸಿಯ ನಂದನ ನಾರದ ಎನಿಪನು
ಕಾಶ್ಯಪ ಪೌತ್ರನ ಕುಲ ಹೇಳಿರಯ್ಯ"

ಬ್ರಾಹ್ಮಣಾದಿ ಶಬ್ದಗಳಿಗೆ ವಿಶಾಲಾರ್ಥವನ್ನು ಪುನಃಸ್ಥಾಪನೆ ಮಾಡುವುದು ಅನ್ನಮಯ್ಯನ ಮತ್ತೊಂದು ಪದ್ಧತಿ. ಗೀತೆಯಲ್ಲಿ ಗುಣಕರ್ಮ ವಿಭಾಗವನ್ನು ಕುರಿತು

"ಚಾತುರ್ವರ್ಣ್ಯಂ ಮಯಾಸೃಷ್ಟಂ
....................
ತಸ್ಯಕರ್ತಾರಮಪಿ ಮಾಂ
ವಿದ್ಧ್ಯ ಕರ್ತಾರಮವ್ಯಯಮ್" 4–13

ಎಂದು ವಿವರಣೆಯಿದೆ. ಭಗವದ್ ವಾಕ್ಯವು ಸ್ವಾಭಾವಿಕವಾಗಿರುವ ವಸ್ತುಸ್ಥಿತಿಯನ್ನು ವರ್ಣಿಸುವುದೇ ಹೊರತು ಮನುಷ್ಯಕೃತ ಜಾತಿಕಲ್ಪನೆಯನ್ನಲ್ಲ. 'ಬ್ರಾಹ್ಮಣ' ಎಂದು ಹೇಳುವ ಶಬ್ದ ಬ್ರಹ್ಮಜ್ಞಾನಿಗಳನ್ನು ಸೂಚಿಸುತ್ತದೆ. ಸಂಕುಚಿತಾರ್ಥವನ್ನು ಹೇಳುವುದಿಲ್ಲ. ಅನ್ನಮಯ್ಯ;

"ಅಣುರೇಣು ಪರಿಪೂರ್ಣುಡೈನ ಶ್ರೀವಲ್ಲಭುನಿ
ಪ್ರಣುತಿಂಚುವಾರು ಪೋ ಬ್ರಾಹ್ಮಲು"

ಎಂದು ಹೇಳುತ್ತಾನೆ. ಹಸುವನ್ನು ತಿನ್ನುವವನಾದರೂ ಪರಮಾತ್ಮನನ್ನು ಸೇವಿಸಿದರೆ ಅವನೂ ಬ್ರಾಹ್ಮಣೋತ್ತಮನೆಂದು ಹೇಳಿದ್ದಾನೆ. (2–314) ಮತ್ತೊಂದು ಕೀರ್ತನೆಯಲ್ಲಿ ಎಂತಹ ಲೋಹವನ್ನಾಗಲಿ ಸ್ಪರ್ಶಮಣಿ ಬಂಗಾರ ಮಾಡುತ್ತದೆ.ಹಾಗೆಯೇ ಭಗವಂತನ ದಿವ್ಯನಾಮವು ಹೇಳಿದರೆ ಯಾವ ಕುಲಜನಾಗಲಿ ಪರಿಶುದ್ಧವಾಗುವನೆಂದು (11. 3. 159) ಸ್ಪಷ್ಟಪಡಿಸಿದ್ದಾನೆ.

ಅನ್ನಮಯ್ಯನ ಜಾತಿ ಹರಿದಾಸರಜಾತಿ. ಈ ಜಾತಿಯಲ್ಲಿ ಹೀನಾಧಿಕಗಳು ಇಲ್ಲ–

"ವೇದಮುಲು ಚದಿವಿಯುನು ವಿಮುಖುಂಡೈ ಹರಿಭಕ್ತಿ
ಯಾದರಿಂಚನಿ ಸೋಮಯಾಜಿಕಂಟೆ
ಏದಿಯುನು ಲೇನಿ ಕುಲಹೀನುಂಡೈನನು ವಿಷ್ಣು
ಪಾದಮುಲು ಸೇವಿಂಚು ಭಕ್ತುಂಡೆ
ಘನುಂಡು 2–303

ಉನ್ನತಕುಲದಲ್ಲಿ ಹುಟ್ಟಿದರೂ, ಹೀನಕುಲದಲ್ಲಿ ಜನ್ಮ ಹೊಂದಿದರೂ ಸತ್ಯವನ್ನು ಅರಿತ ಮಹಾತ್ಮನೇ ಶ್ರೇಷ್ಠನಾದವನು. ವೇದಗಳನ್ನು ಅಧ್ಯಯನಮಾಡಿ ಹರಿಭಕ್ತಿಯಿಲ್ಲದ ಸೋಮಯಾಜಿಗಿಂತಲೂ ಒಂದೂ ಇಲ್ಲದ ಕುಲಹೀನನು ವಿಷ್ಣು ಪಾದವನ್ನು ಸೇವಿಸಿದರೇ ಆ ಭಕ್ತನೇ ಉತ್ತಮನು.

ಜಾತಿಮತ ಭೇದಗಳನ್ನು ಬಿಟ್ಟು ಪರಮಾತ್ಮನನ್ನು ಸೇವಿಸಬೇಕೆಂದು ಅನ್ನಮಯ್ಯ ಬ್ರಹ್ಮ ಸ್ವರೂಪವನ್ನು ಈ ರೀತಿಯಾಗಿ ಹೇಳುತ್ತಾನೆ.

ಬ್ರಹ್ಮಮೊಕಟೇ ಬ್ರಹ್ಮಮೊಕಟೇ ಪರ
ಬ್ರಹ್ಮಮೊಕಟೇ ಪರಬ್ರಹ್ಮಮೊಕಟೇ
......................................
ಮೆಂಡೈನ ಬ್ರಾಹ್ಮಣುಡು ಮೆಟ್ಟುಭೂಮಿ ಯೊಕಟೇ
ಚಂಡಾಲುಡುಂಡೇಟಿ ಸರಿಭೂಮಿಯೊಕಟೇ
( –15)

ಬ್ರಾಹ್ಮಣನು, ಚಂಡಾಲನು ಭಿನ್ನಪ್ರದೇಶಗಳಲ್ಲಿ ಸಂಚಾರ ಮಾಡಿದರೂ ಅವರು ತಿರುಗುವ ಭೂಮಿ ಯೊಂದೇ.

ಅನ್ನಮಯ್ಯ ಹಲವಾರು ಸ್ಥಳಗಳಲ್ಲಿ ಜಾತಿ ಪ್ರಸ್ತಾವನೆ ಮಾಡಿದ್ದಾನೆ. ತಾನು ಬ್ರಾಹ್ಮಣನಾಗಿದ್ದರೂ;

'ಅಂದಿ ನೀ ಸೇವ ಸೇಯನಿ ಅಗ್ರಜನ್ಮಮೈನ ನೊಲ್ಲ' (2–238) ಎಂದು ಹೇಳುತ್ತಾನೆ. ನಿನ್ನ ಸೇವೆ ನನಗೆ ಮುಖ್ಯ; ಅದು ಇಲ್ಲದಿದ್ದರೆ ನನಗೆ ಅಗ್ರಜನ್ಮವಾದ ಬ್ರಾಹ್ಮಣಜನ್ಮವು ಬೇಕಾಗಿಲ್ಲ. ಒಂದು ಕಡೆ 'ಜತಗಾನಿ ತರುಣಿ ಏ ಜಾತಯಿನಾ ನದೇಚಾಲು' (2–114) 'ಅನುಕೂಲವತಿಯಾದ ಸತಿ ಯಾವಕುಲವಾದರೇನು' ಎಂದು ಹೇಳುತ್ತಾನೆ.

ಭಕ್ತರೆಲ್ಲರು ಒಂದೇ ಜಾತಿಗೆ ಸೇರಿದವರು. ಅವರ ದೃಷ್ಟಿ ವಿಶಾಲವಾದದ್ದು. ಸೌಮ್ಯವಾದವೇ ಅವರ ಕೀರ್ತನೆಗಳ ಜೀವನಾಡಿ.

★

# ರಾಮಾಯಣದ ಒಂದು ಪ್ರಸಂಗ

— ರಘುಸುತ

ಹದಿನಾಲ್ಕು ವರ್ಷಗಳ ವನವಾಸಕ್ಕಾಗಿ ಸೀತಾಲಕ್ಷ್ಮಣರೊಡಗೂಡಿ ಶ್ರೀರಾಮ ಹೊರಟಿದ್ದಾನೆ. ಅವರುಗಳನ್ನು ಹೊತ್ತ ರಥವು ಪ್ರಜೆಗಳ ದುಃಖದಲ್ಲಿ ಭಾಗಿಯಾದಂತೆ ಮೆಲ್ಲಮೆಲ್ಲನೆ ಮುಂದುವರಿಯುತ್ತಿದೆ. ನಾರು ಮಡಿಯನ್ನುಟ್ಟಿರುವ ರಾಮಲಕ್ಷ್ಮಣರು ಋಷಿಮುನಿಗಳಂತೆ ಕಂಗೊಳಿಸಿದರೆ, ಸೀತೆಯು ಋಷಿಪತ್ನಿಯಂತೆ ಶೋಭಿಸುತ್ತಿದ್ದಳು. ಅವರು ಹಸನ್ಮುಖಿಗಳಾಗಿದ್ದರು.

ರಥವನ್ನು ನಡೆಸುತ್ತಿದ್ದ ಮಂತ್ರಿಯಾದ ಸುಮಂತ್ರನು ಉತ್ತಮವಾದ ಉಡುಪನ್ನು ಧರಿಸಿದ್ದರೂ ಅವನ ಮುಖ ಮ್ಲಾನವಾಗಿತ್ತು. ಅವನು ರಾಹುಗ್ರಸ್ತ ಚಂದ್ರನಂತೆ ಕಳಾಹೀನನಾಗಿದ್ದನು. ಯಾವುದೋ ಗಹನವಾದ ಯೋಚನೆ ಅವನನ್ನು ಪೀಡಿಸುತ್ತಿದೆಯೆಂದು ಅವನ ಮುಖ ನೋಡಿದ ಕೂಡಲೆ ತಿಳಿದು ಕೊಳ್ಳಬಹುದಾಗಿತ್ತು.

ಅಯೋಧ್ಯೆ ಮತ್ತು ತಮಸಾ ನದಿಗಳು ಅವರುಗಳಿಂದ ದೂರವಾಗಿ ಹಿಂದೆ ಉಳಿದವು.

ರಾಮನು ಸುಮಂತ್ರನನ್ನು ನೋಡಿದನು. ಅವನ ಮನದಲ್ಲಿ ಉಂಟಾಗುತ್ತಿದ್ದ ಗಲಿಬಿಲಿಯನ್ನು ನೋಡಿ ಅರ್ಥ ಮಾಡಿಕೊಂಡು ತನ್ನಲ್ಲಿ ತಾನೇ ನಗುತ್ತಾ ರಾಮನು ಪ್ರಶ್ನಿಸಿದನು.

'ಆರ್ಯ! ಸುಮಂತ್ರ! ಯಾವುದೋ ಒಂದು ವಿಷಯ ನಿನ್ನ ಮನಸ್ಸನ್ನು ಕೊರೆಯುತ್ತಿದೆ. ಅದೇನು ತಿಳಿಸು............'

ಸುಮಂತ್ರನು ಬೇಗ ಉತ್ತರ ಕೊಡಲಿಲ್ಲ. ಕುದುರೆಗಳ ಕಡೆ ದೃಷ್ಟಿ ನೆಟ್ಟಿದ್ದವನು, ಹಿಂದಕ್ಕೆ ತಿರುಗಿ, ರಾಮನ ಮುಖವನ್ನೊಮ್ಮೆ ವೀಕ್ಷಿಸಿ, ಮುಂದಿದ್ದ ಕಾಡುದಾರಿಯನ್ನು ನೋಡತೊಡಗಿದ. ಮತ್ತೆ ರಾಮನು ಅದೇ ಪ್ರಶ್ನೆಯನ್ನು ಕೇಳಿದನು ಲಕ್ಷ್ಮಣನೂ ಒತ್ತಾಯಿಸಿದ.

ಕೋಸಲ ದೇಶದ ಎಲ್ಲೆ ಬಂದಿತು. ಅಲ್ಲಿ ಸುಮಂತ್ರ ರಥವನ್ನು ನಿಲ್ಲಿಸಿದ. ಹತ್ತಿರದಲ್ಲಿ ದೊಡ್ಡದೊಂದು ಅರಳೀಮರವಿತ್ತು. ಬಳಿಯಲ್ಲಿ ಜುಳು ಜುಳು ಹರಿಯುವ ಒಂದು ಸಣ್ಣ ತೊರೆ. ಅದರಲ್ಲಿ ಕೈಕಾಲುಗಳನ್ನು ತೊಳೆದು ಆಚಮನ ಮಾಡಿ ಶುಚಿರ್ಭೂತರಾಗಿ, ಮರದ ತಣ್ಣಿನ, ತಣ್ಣನೆಯ ನೆರಳಿನಲ್ಲಿ ಅವರೆಲ್ಲ ಕುಳಿತು ವಿಶ್ರಮಿಸಿಕೊಳ್ಳತೊಡಗಿದರು.

ಆಗ ಸುಮಂತ್ರನು ಬಿನ್ನವಿಸಿಕೊಂಡನು:

'ಆರ್ಯ ಶ್ರೀರಾಮ! ನನ್ನನ್ನು ತಪ್ಪು ತಿಳಿಯಬಾರದು'

ಅವನ ಸಂಕೋಚವನ್ನು ದೂರಮಾಡುವ ರೀತಿಯಲ್ಲಿ ಅಭಯಪ್ರದಾನಸ್ವರದಲ್ಲಿ ರಾಮ ಹೇಳಿದ:

'ಹೇಳು! ಸುಮಂತ್ರ! ನೀನು ಮಂತ್ರಿ



## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಆಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಮಹೋದಯ! ನಿನ್ನ ಯಾವುದೇ ಅನುಮಾನವನ್ನಾಗಲಿ ತೀರಿಸಲು ಪ್ರಯತ್ನಿಸುತ್ತೇನೆ'.

'ಧರ್ಮದೇವತೆಯೆ! ಮರಕುಟುಕ ಹಕ್ಕಿಯಂತೆ ಸಂಶಯವೊಂದು ನನ್ನ ಹೃದಯ ವೃಕ್ಷವನ್ನು, ಕುಟುಕುತ್ತಿದೆ. ಅದರ ಪರಿಹಾರವನ್ನು ನೀನೇ ಸೂಚಿಸಬೇಕು.

'ಅದೇನು ತಿಳಿಸು'.

'ನಾವುಗಳು ಅಯೋಧ್ಯಾ ನಗರಿಯಿಂದ ಹೊರಟಾಗ ಅದರ ಪುರಜನರೆಲ್ಲ ನಮ್ಮನ್ನೆ ಹಿಂಬಾಲಿಸಿದರು. ರಾಮ ನಿನ್ನ ಮೇಲಿರುವ ಪ್ರೇಮಪಾಶವು ಅವರನ್ನು ಆ ರೀತಿ ಎಳೆದು ತಂದಿತು. ಇಂದು ಬೆಳಗಿನ ಜಾವ ಅವರೆಲ್ಲರೂ ಮಲಗಿರುವಾಗ ನಾವುಗಳು ಅಲ್ಲಿಂದ ಹೊಂಟುದುದೂ, ತಮಸಾ ನದಿಯನ್ನು ದಾಟಿದ ಮೇಲೆ ಹೆದ್ದಾರಿಯಲ್ಲಿ ಉತ್ತರಾಭಿಮುಖವಾಗಿ ಸ್ವಲ್ಪ ದೂರ ರಥವನ್ನು ನಡೆಸಿ ನಂತರ ಅದೇ ಜಾಡಿನಲ್ಲಿ ರಥವನ್ನು ಹಿಂತಿರುಗಿಸಿ ತಂದುದ್ದೂ, ಆ ನಂತರ ಈ ಕಾಡಿನ ದಾರಿಯನ್ನು ಹಿಡಿದುದ್ದೂ, ಹಿಂಬಾಲಿಸಿ ಬರುತ್ತಿರುವ ಆ ಪುರಜನರನ್ನು ದಾರಿ ತಪ್ಪಿಸಿ ಮರುಳು ಗೊಳಿಸುವುದಕ್ಕಾಗಿ ತಾನೆ!...... ಪ್ರಜಾರಕ್ಷಕನೆನಿಸಿಕೊಂಡಿರುವ ನಿನ್ನಿಂದ ಉಂಟಾಗಿರುವ ಈ ಕಾರ್ಯವು ಧರ್ಮದ ದೃಷ್ಟಿಯಲ್ಲಿ ವಂಚನೆ ಎನಿಸಿಕೊಳ್ಳುವುದಿಲ್ಲವೆ? ನಿನ್ನನ್ನೆ ನಂಬಿ ಬಂದವರೆಗೆ ನೀನು ಈ ರೀತಿ ಮಾಡುವುದು ಅನ್ಯಾಯವಲ್ಲವೆ?......ಇದು ಸರಿಯೆ?.

ಲಕ್ಷ್ಮಣನಿಗೂ ಇದೇ ಸಂಶಯ ತಲೆದೋರಿ, ತೊಂದರೆ ಕೊಡುತ್ತಿದ್ದುದನ್ನು ಅವನ ಮುಖ ನೋಡಿಯೆ, ರಾಮನು ಅರ್ಥ ಮಾಡಿಕೊಂಡ. ಇದು ಬರಿ ಇವರಿಬ್ಬರ ಸಮಸ್ಯೆಯಲ್ಲ, ಭವಿಷ್ಯ ಜನಾಂಗದ ಸಮಸ್ಯೆ ಎಂದು ಕೊಂಡ ರಾಮ, ಹೇಳತೊಡಗಿದ:

'ನಿಮಗೆ ತೋರಿರುವ ಸಮಸ್ಯೆ ಸಹಜವಾದುದು. ನಿಮ್ಮಗಳ ದೃಷ್ಟಿಯಲ್ಲಿ ಇದು ವಂಚನೆ ಎಂದು ತೋರಿರುವುದೂ ಸರಿಯೆ... ಆದರೆ ಇಲ್ಲೊಂದು ಧರ್ಮಸೂಕ್ಷ್ಮ ಇರುವುದನ್ನು ನೀವು ಮರೆತಿರಿ'

'ಏನದು?'

'ಪ್ರಜೆಗಳು ನನ್ನ ಮೇಲಿನ ವಾತ್ಸಲ್ಯದಿಂದ ಹಿಂಬಾಲಿಸಿ ಬಂದುದ್ದು ನಿಜವೇ ಸರಿ. ಆದರೆ ಅವರುಗಳ ಹೃದಯದಲ್ಲಿ ಅರಿಷಡ್ವರ್ಗಗಳಲ್ಲಿ ಒಂದಾದ ಮೋಹವು ಅತ್ಯಧಿಕವಾಗಿದ್ದು, ತಮ್ಮನ್ನು ತಾವು ಮರೆತಿದ್ದರು. ಅಂತೆಯೇ ತಮ್ಮ ಕರ್ತವ್ಯವನ್ನು ಮರೆತಿದ್ದರು. ತಮಗಾಗಿ ನಿರ್ಮಿತವಾಗಿರುವ ನಗರದಲ್ಲಿ ವಾಸಿಸುವುದು ಪ್ರಜೆಗಳ ಕರ್ತವ್ಯ. ಹಾಗೆ ಮಾಡದೆ ಇದ್ದರೆ ಅವರು ಕರ್ತವ್ಯ ಚ್ಯುತರಾದಂತೆ. ಅವರ ಕರ್ತವ್ಯದ ಜವಾಬ್ದಾರಿಯ ಪರಿಜಯುವನ್ನು ಮಾಡಿ ಕೊಡುವುದಕ್ಕಾಗಿ ಈ ಉಪಾಯವನ್ನು ಹುಡುಕಬೇಕಾಯಿತು......ಅಲ್ಲದೆ ಇಲ್ಲಿ ಮತ್ತೊಂದು ಸಮಸ್ಯೆ ಉದ್ಭವಿಸುತ್ತಿತ್ತು.'

'ಯಾವುದು?'

'ಈ ಪ್ರಜೆಗಳೆಲ್ಲರೂ ನನ್ನನ್ನು ಹಿಂಬಾಲಿಸಿ ಬಂದಲ್ಲಿ ದಾರಿಯುದ್ದಕ್ಕೂ ಇವರುಗಳ ಯೋಗ ಕ್ಷೇಮ, ರಕ್ಷಣೆ, ಆಹಾರ ಪಾನೀಯಗಳು, ನಿವಾಸಗಳ ವ್ಯವಸ್ಥೆಯ ಸಮಸ್ಯೆ ಉಂಟಾಗುತ್ತಿತ್ತು. ರಾಜನಾದವನು ತನ್ನ ಆಶ್ರಿತರ ವ್ಯವಸ್ಥೆಯನ್ನು ಮಾಡಬೇಕಾದದು ಅವನ ಕರ್ತವ್ಯವಾಗುತ್ತದೆ.'

ಸುಮಂತ್ರ ನಡುವೆಯ ಹೇಳಿದ:

'ಅವರುಗಳೇ ಈ ಸಮಸ್ಯೆಯನ್ನು ಹೇಗಾದರೂ ಬಿಡಿಸಿಕೊಳ್ಳುತ್ತಿದ್ದರು. ನಿಮಗೆ ಯಾವ ತೊಂದರೆಯನ್ನು ಕೊಡುತ್ತಲೇ ಇರಲಿಲ್ಲ.'

'ಹಾಗೆ ಮಾಡಿದಲ್ಲಿ ನನಗೆ ವಿಧಿಸಿರುವ ನಿಯಮವನ್ನು ತಪ್ಪಿ ನಡೆದಂತಾಗುತ್ತಿತ್ತು.'

ಸುಮಂತ್ರ ಗಾಬರಿಯಿಂದ ಕೇಳಿದ:
'ನಿಯಮವನ್ನು ತಪ್ಪಿ ನಡೆಯುವುದೆ?'
ಮುಗುಳುನಗುತ್ತಾ ರಾಮ ಹೇಳಿದ

'ಹೌದು.........ತೀರ್ಥರೂಪರವರಿಂದ ಕೈಕೇಯಿ ಮಾತೆ ಕೇಳಿರುವ ವರಗಳು ಎರಡೇ

(28ನೇ ಪುಟ ನೋಡಿ)

# ಸರ್ವಜ್ಞ ಹಾಗೂ ವೇಮನ

ಅದ್ಭುತ ಚೇತನಗಳು ಪ್ರಪಂಚದ ಯಾವುದೇ ಭಾಗದಲ್ಲಿರಲಿ, ಯಾವುದೇ ಕಾಲಕ್ಕೆ ಸೇರಿರಲಿ; ಅವರ ಆದರ್ಶಗಳು, ದೃಷ್ಟಿಕೋನ, ಧ್ಯೇಯ ಧೋರಣೆಗಳು ಒಂದೇ ಆಗಿರುತ್ತವೆ. ಎಂಬುದು ಅನುಭವ ವೇದ್ಯ. ಸಾಹಿತ್ಯ ಕ್ಷೇತ್ರವೂ ಇದರಿಂದ ಹೊರತಾಗಿಲ್ಲ. ಅಂಥವರ ಸಾಲಿನಲ್ಲಿ ಕನ್ನಡ ನಾಡಿನ ಸರ್ವಜ್ಞ, ತೆಲುಗು ನಾಡಿನ ವೇಮನ ಇವರಿಬ್ಬರೂ ತಮ್ಮದೇ ಆದ ಮಹತ್ವವನ್ನು ಹೊಂದಿದ್ದಾರೆ. ಇವರ ಕಾರ್ಯ ಕ್ಷೇತ್ರದ ಮೂಲ ಸಮಾಜಸೇವೆ. ಅದಕ್ಕಾಗಿ ಅವರು ಆರಿಸಿಕೊಂಡದ್ದು ಸಾಹಿತ್ಯ ಕ್ಷೇತ್ರ. ಇವರು ತಮ್ಮ ಪದ್ಯಗಳ ಮೂಲಕ, ಮಾರ್ಮಿಕವಾಗಿ ಜನರಲ್ಲಿದ್ದ ಹಲವು-ಹನ್ನೊಂದು ಲೋಪದೋಷಗಳ ನಿವಾರಣೆಗಾಗಿ ಶ್ರಮಿಸಿದರು.

ಸಮಾಜ ಸುಧಾರಣೆಗೆ ಹೊರಟ ಇವರು ಜನರಲ್ಲಿದ್ದ ಡಾಂಭಿಕತೆಯನ್ನು ಕಂಡು ಸಿಡಿದೆದ್ದಿದ್ದಾರೆ. ನಿಜವಾದ ದೇವರು ಯಾರು? ಗುರುವಾಗಿರಬೇಕಾದವನಲ್ಲಿ ಇರಬೇಕಾದ ಅರ್ಹತೆ ಏನು?; ಜ್ಞಾನಿಯ ಲಕ್ಷಣಗಳೇನು ಇವುಗಳನ್ನು ಅರ್ಥವತ್ತಾಗಿ ತಿಳಿಸಿದ್ದಾರೆ.

"ಓದಿ ಬೂದಿಯ ಪೂಸಿ ತೇದು ಕಾವಿಯ
ಹೊದೆದು
ಹೋದಾತ ಯೋಗಿ ಎನಬೇಡ; ಇಂದ್ರಿ
ಯವ
ಕಾದಾತ ಯೋಗಿ, ಸರ್ವಜ್ಞ"—

ಎಂದು ಸರ್ವಜ್ಞ ಹೇಳಿದರೆ,

"ಬೋಡಿ ತಲಲನೆಲ್ಲ ಬೂಡಿದ ಪೂತಲ
ನಾಸನಮುಲ ಮೂರು ತಾಸನಮುಲ
ಯೋಗಿಗಾಡು ಲೋನು ಬಾಗುಗಾ
ಕುಂಡಿನ"

ಎಂಬುದು ವೇಮನನ ಮಾತು.

ಅಂದರೆ ಕೇವಲ ವೇದ, ಆಗಮ, ಉಪನಿಷತ್ತುಗಳ ಅಧ್ಯಯನ ನಡೆಸಿ, ಯೋಗಾಸನ ಮಾಡುತ್ತಾ, ಹೆಂಡತಿ ಮಕ್ಕಳಿಂದ ದೂರವಾಗಿ ಹೋದರೆ, ಯಾರೂ ಯೋಗಿಯಾಗಲಾರರು. ಮುಖ್ಯವಾಗಿ ಅವರು ಸಾಧಿಸಬೇಕಾದದ್ದು ಅಂತರಂಗ ಶುದ್ಧಿ, ಸಂಯಮಗಳು. ಜೊತೆಗೆ ಅಜ್ಞಾನ, ಕಾಮ, ಕ್ರೋಧಗಳನ್ನೂ ಗೆಲ್ಲಬೇಕು ಎಂಬುದೇ ಇವರ ಆಶಯ.

ದೇವರ ಒಲುಮೆಯನ್ನು ಪಡೆಯ ಬೇಕಾದರೆ ಮಾನವನು ದಯೆ, ಅಹಿಂಸೆಗಳನ್ನು ಅನುಸರಿಸ ಬೇಕೇಹೊರತು, ಯಜ್ಞಯಾಗ, ಬಲಿ ಇವುಗಳಿಂದಲ್ಲ. ಈ ಜಗತ್ತಿನಲ್ಲಿ ಜನರು ಅನೇಕ ಆಚಾರ ವಿಚಾರಗಳಿಗೆ ಒಳಗಾಗಿ ಶಾಂತಿಯಿಲ್ಲದೆ, ನೆಲೆಯಿಲ್ಲದೆ ತೊಳಲುವುದನ್ನು ಕಂಡು ಅವರ ನೆರವಿಗೂ ಬಂದಿದ್ದಾರೆ.



"ಆ ದೇವ ಈ ದೇವ ಮಾದೇವನೆನಬೇಡ
ಆ ದೇವರದೇವ ಭುವನಪ್ರಾಣಿಗಳಿ
ಗಾದವನೆ ದೇವ ಸರ್ವಜ್ಞ"

ಎಂದು ದೇವರ ಹಿರಿಮೆಯನ್ನು ಸರ್ವಜ್ಞ ಸಾರಿದ್ದಾನೆ. ವೇಮನನಾದರೊ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ—

"ಶೈವ ವೈಷ್ಣವಾದಿ ಷಣ್ಮತಂಬುಲಕೆಲ್ಲ
ದೇವುಡೊಕ್ಕಡನುಚುದೆಲಿಯಲೇರು
ತಮಕು ಭೇದಮಯಿನ ತತ್ವಂಬು
ಭೇದಮಾ"

ಎಂದರೆ ಶೈವಾದಿ ಆರು ಮತಗಳೂ ದೇವನೊಬ್ಬನೇ ಎಂದು ತಿಳಿಯದಾದವು. ಆದರೆ ನಮ್ಮಲ್ಲಿ ಭೇದವಿದ್ದಾಕ್ಷಣಕ್ಕೆ ಇರುವ ನಿತ್ಯ ಸತ್ಯವಾದ ತತ್ವ ಬೇರೆಯಾಗಲು ಸಾಧ್ಯವೇ ಎಂದು ನಮ್ಮ ದೃಷ್ಟಿದೋಷವನ್ನು ಖಂಡಿಸಿದ್ದಾನೆ.

ಜ್ಞಾನಿಗಳು ಹೇಗಿರಬೇಕೆಂಬುದನ್ನು ಎಚ್ಚರಿಕೆ ನೀಡುವುದರ ಮೂಲಕ ಸೂತ್ರಪ್ರಾಯವಾಗಿ ತಿಳಿಸಿದ್ದಾರೆ.

"ಬ್ರಹ್ಮವೇತ್ತಲಮನಿ ಪೌರುಷ
ಮಾಡೇರು
ಬ್ರಹ್ಮಮನಗ ದಾನಿ ಭಾವಮೇಮಿ
ತೆಲುವೋ ನಲುಪೋ ಯೆರುಪೋ ತೆಲ
ಸಿನ ಬುಲುಕುಡಿ"

ಅಂದರೆ ನಾವು ಬ್ರಹ್ಮಜ್ಞಾನಿಗಳೆಂದು ಪೌರುಷದ ಮಾತನಾಡದಿರಿ, ಅಯ್ಯೋ ಬ್ರಹ್ಮದ ಭಾವವೇನು? ಅದು ಹೇಗಿದೆ ಬಿಳುಪೋ, ಕಪ್ಪೋ, ಕೆಂಪೋ ತಿಳಿದಿದ್ದರೆ ಹೇಳಿರಿ' ಎಂದು ವೇಮನನು ಸವಾಲನ್ನು ಎಸೆದಿದ್ದಾನೆ. ಸರ್ವಜ್ಞನಾದರೋ ಸುಂದರವಾದ ಹೋಲಿಕೆಯ ಮೂಲಕ ಈ ವಿಷಯವನ್ನು ಮನದಟ್ಟು ಮಾಡಿದ್ದಾನೆ—

"ಬೊಮ್ಮವನು ಅರಿದಿಹರೆ ಸುಮ್ಮನೆ
ಇರಬೇಕು
ಬೊಮ್ಮವನರಿದು ಉಸುರಿದರೆ ಕಳ
ಹೋಗಿ
ಕೆಮ್ಮಿದಂತಕ್ಕು ಸರ್ವಜ್ಞ"

ಎಂದು ತಿಳಿಸಿದ್ದಾನೆ. ಕನ್ನಡಿಯು ಯಾರನ್ನೂ 'ತನ್ನನ್ನು ನೋಡು ಬಾ' ಎಂದು ಕರೆಯದು. ಅಗತ್ಯವಿದ್ದವರು ಅದರ ಬಳಿಗೆ ಹೋಗುವರು.

ಮನುಷ್ಯನ ಜೀವನ ಸುಖ-ಕಷ್ಟ ನೋವು, ನಲಿವು, ಎಂಬ ದ್ವಂದ್ವಗಳಿಂದ ಆಗಿದೆ. ಆಯಾ

**ಭಾರ್ಗವಿಶ್ರೀ**

ಸಂದರ್ಭಕ್ಕೆ ತಕ್ಕ ಹಾಗೆ ನಡೆದು ಕೊಳ್ಳ ಬೇಕೆಂಬುದರ ಬಗ್ಗೆ ಇವರ ಅಭಿಪ್ರಾಯ ಬಹಳ ಗಮನಾರ್ಹ. ಕಷ್ಟದಲ್ಲಿರುವವನನ್ನು ಕಂಡು ಸರ್ವಜ್ಞನು—

"ಪುಡಿಯಾದನಂಗಜನು ಹಿಡಿವಡೆದ ಹನುಮಂತ
ಪೊಡವಿಗೀಶ್ವರನು ತಿರಿದುಂಡನುಳಿದರ
ಸಡಗರವೇನು"—ಸರ್ವಜ್ಞ

ಎಂಬ ಸಮಾಧಾನವನ್ನು ನೀಡುತ್ತಾನೆ. ಅವನ ಅಭಿಪ್ರಾಯದಲ್ಲಿ ವಿಧಿವಿಲಾಸವು ಯಾರಿಗೂ ಅರಿಯದಹಾಗೆ ತನ್ನ ಕಾರ್ಯ ನಡೆಸಿಬಿಡುತ್ತದೆ. ಆದರೆ, ಪ್ರಾಪ್ತಿಯಿದ್ದರೆ ಯಾವುದೂ ತಪ್ಪದು. ಇದನ್ನು ವೇಮನನೂ ಅನುಮೋದಿಸುತ್ತಾನೆ.

"ಚಿಪ್ಪಲೋನ ಬಡ್ಡ ಚಿನುಕು ಮುತ್ಯಂಬಾಯೆ
ನೀಳ್ಳಬಡ್ಡ ಚಿನುಕು ನೀಟಗಲಸೆ
ಪ್ರಾಪ್ತಮು ಗಲಚೋಟ ಫಲಮೇಲ
ತಪ್ಪುರಾ"—

"ಕಪ್ಪೆಯ ಚಿಪ್ಪಿನಲ್ಲಿ ಬಿದ್ದ ಹನಿ ಮುತ್ತಾಯಿತು, ನೀರಿನಲ್ಲಿ ಬಿದ್ದಹನಿ ನೀರಾಗಿಹೋಯಿತು. ಪ್ರಾಪ್ತಿಯಿರುವಲ್ಲಿ ಫಲವೇಕೆ ತಪ್ಪುತ್ತದೆ"?—ಆದುದರಿಂದ ಈ ವಿಷಯದಲ್ಲಿ ನಾವು ವೃಥಾ ಕೊರಗುವುದು ಬೇಡ. ತಾಳ್ಮೆ ಬೆಳೆಸಿಕೊಳ್ಳ ಬೇಕೆಂದು ಸರ್ವಜ್ಞ ಹೇಳುತ್ತಾನೆ—

"ಅಂತಕ್ಕು, ಇಂತಕ್ಕು ಎಂತಕ್ಕು ಎನಬೇಡ
ಚಿಂತಿಸಿ ದೇಹ ಜಡವಕ್ಕು ಶಿವತೋರಿ
ದಂತಿಹುದೆ ಲೇಸು ಸರ್ವಜ್ಞ"—

ಎಂದು ತೃಪ್ತಿ ಸಮಾಧಾನಗಳನ್ನು ಬೋಧಿಸಿದ್ದಾನೆ. ಸುಖ ಬಂದಾಗ ಹೇಗೆ ನಡೆದು ಕೊಳ್ಳಬೇಕೆಂಬುದನ್ನೂ ಸೂಚಿಸಿದ್ದಾರೆ. 'ಸಿರಿಬಂದ ಕಾಲಕ್ಕೆ ಕರೆದು ದಾನ ಮಾಡಬೇಕಂತೆ' ಏಕೆಂದರೆ 'ಲೋಭದಿಂ ಕೌರವನು ಲಾಭವನು ಪಡೆದನೆ' ಎನ್ನುತ್ತಾನೆ. ಅಲ್ಲದೆ

"ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ತಾನಿರಿಸಿ
ಸಣ್ಣಗೆ ನೆಲನ ಸಾರಿಸಿದನ ಬಾಯೊಳಗೆ
ಮಣ್ಣು ಕಾಣಯ್ಯ ಸರ್ವಜ್ಞ"—

ಎಂದು ಲೋಭಿಯು ಇಹ ಪರ ಎಲ್ಲಿಯೂ ಸಾರ್ಥಕ್ಯ ಪಡೆಯಲಾರ ಎನ್ನುತ್ತಾನೆ. ಇದನ್ನೇ ವೇಮನ ಮತ್ತೊಂದು ವಿಧವಾಗಿ ಸ್ವಾರಸ್ಯ ಪೂರ್ಣವಾಗಿ ಹೇಳಿದಾನೆ.

ಕಲಿಮಿಗಲ್ಗೆನೇಮಿ ಕರುಣಮುಲೇಕುಂಡನಾ
ಕಲಿಮಿ ಯೇಲ ನಿಲ್ಚು ಕರ್ಮುಲಕನು
ತೇನೆಗೂರ್ಚೆ ಯೀಗ ತೆರುವುನಬೋವದಾ"—

ಕರುಣೆಯಿಲ್ಲದವನಿಗೆ ಎಷ್ಟು ಐಶ್ವರ್ಯ ಲಭಿಸಿದರೆ ತಾನೆ ಏನು ಫಲ? ಆ ಪಾಪಿಗಳಿಗೆ, -ಕರುಣೆಯಿಲ್ಲದವರಿಗೆ ಅದು ದಕ್ಕದು. ಜೇನು ನೊಣ ಕಷ್ಟಪಟ್ಟು ಜೇನನ್ನು ಸಂಗ್ರಹಿಸಿ ಕಂಡವನ ಪಾಲುಮಾಡಿ, ಹಾರಿ ಹೋಗುವುದಿಲ್ಲವೆ? ಎಂದು ಚಿತ್ರವತ್ತಾಗಿ ತಿಳಿಸಿದ್ದಾನೆ. ಇದಕ್ಕೆಲ್ಲಾ ಪರಿಹಾರವೆಂದರೆ ವ್ಯಕ್ತಿ ದಾನ ಮಾಡಬೇಕು. ಆ ದಾನ ಹೇಗಿರಬೇಕೆಂಬುದರ

ಬಗ್ಗೆಯೂ ಇವರದೇ ಆದ ನಿಲುವಿದೆ. ಕೊಡುವ ದಾನ ಸಾರ್ಥಕವಾಗಬೇಕು. ಏಕೆಂದರೆ;

"ಆಡದೇ ಕೊಡುವವನು ರೂಢಿಯೊಳಗು
ತ್ತಮನು
ಆಡಿಕೊಡುವವನು ಮಧ್ಯಮನಧಮ ತಾ
ನಾಡಿಕೊಡದವನು ಸರ್ವಜ್ಞ"—

ಆದ್ದರಿಂದ ನಿಗರ್ವದಿಂದ ದಾನ ಮಾಡಬೇಕೆಂದು ಸರ್ವಜ್ಞ ಹೇಳಿದ್ದಾನೆ. ವೇಮನನಾದರೋ

"ಆರಯು ನಾಸ್ತಿಯನಕ ನಡ್ಡ
ಮಾಟಾಡಕ
ತೊಟ್ರು ಬಡಕ ಮದಿನಿ ತನ್ನುಕೊನಕ
ತನು ದಾ ಗನುಗೊನಿ ತಾ ಬೆಟ್ಟಿನದಿ
ಪೆಟ್ಟು"—

ಅಡ್ಡ ಮಾತಾಡದೆ, ಹಿಂದು ಮುಂದು ಯೋಚಿಸದೆ, ಮನಸ್ಸಿನಲ್ಲಿ ಒದ್ದಾಟ ಹಚ್ಚಿಕೊಳ್ಳದೆ, ತನ್ನ ಯೋಗ್ಯತೆಯರಿತು ಆದಷ್ಟು ಕೊಡು ಎಂದು ಸೂತ್ರಬದ್ಧವಾಗಿ ಹೇಳಿದ್ದಾನೆ. ಆದರೆ ದಾನ ಮಾಡುವ ಬುದ್ಧಿ ಅಷ್ಟು ಸುಲಭವಾಗಿ ಬರದು. ಅದನ್ನು ಪ್ರಯತ್ನ ಪೂರ್ವಕವಾಗಿಯಾದರೂ ಸಾಧಿಸಿಕೊಳ್ಳಬೇಕು. ಅಲ್ಲದೆ ದಾನ ಕೇಳುವವರೂ ಕೂಡ ವ್ಯಕ್ತಿಯ ಸ್ವಭಾವ ತಿಳಿದು ಬೇಡಬೇಕು. ಹಾಗಿಲ್ಲದಿದ್ದರೆ—

"ಗೊಡ್ಡುಟಾವು ಬಿತುಕ ಕುಂಡ
ಗೊಂ ಪೋಯಿನ
ಪಂಡ್ಲನೂಡದನ್ನು ಪಾಲ ನೀವು
ಲೋಭಿವಾನಿ ನಡುಗ ಲಾಭಂಬು
ಲೇದಯಾ"—

ಗೊಡ್ಡಾಕಳ ಹಾಲುಕರೆಯಲು ಮಡಕೆ ಕೊಂಡು ಹೋದರೆ ಅದು ಹಲ್ಲು ಉದುರುವ ಹಾಗೆ ಒದೆಯುವುದೇ ಹೊರತು ಹಾಲು ಕೊಡದು-ಹೀಗೆ ಅನಾಹುತವಾಗಬಹದೆಂದು ವೇಮನ ಎಚ್ಚರಿಕೆ ನೀಡುತ್ತಾನೆ. ಅವರು ಏಕೆ ಹೀಗೆ ವರ್ತಿಸುತ್ತಾರೆ ಎಂಬುದಕ್ಕೆ ಸರ್ವಜ್ಞನು - ದಾನವೆಂದರೆ ಚಾಣದಲಿ (ಹೊಡೆದಂತೆ) ಕಡಿದಂತೆ-ಎಂದು ಅಂಥ ಲೋಭಿಯ ಮನದಲ್ಲಾಗುವ ತಾಕಲಾಟವನ್ನು ಅರ್ಥಗರ್ಭಿತವಾಗಿ ಚಿತ್ರಿಸಿದ್ದಾನೆ. ಇವರ ಈ ನುಡಿಗಳು ದಾನಿಗಳಿಗೆ ಸ್ಫೂರ್ತಿ ಹಾದಿಯನ್ನು ರೂಪಿಸಿಕೊಟ್ಟರೆ ಲೋಭಿಗಳನ್ನು ಹೊಡೆದೆಚ್ಚರಿಸಿ ಯಾಚಕರಿಗೆ ಮಾರ್ಗದರ್ಶನ ನೀಡಿವೆ.

ಯಾವುದೇ ಧರ್ಮವಾಗಲಿ ಮತವಾಗಲಿ ಅವೆಲ್ಲವನ್ನೂ ಒಂದೇ ಆಗಿ ಗೌರವಿಸುವ ಅವುಗಳ ದೋಷವನ್ನು ನಿರ್ದಾಕ್ಷಿಣ್ಯವಾಗಿ ಚರ್ಚಿಸುವ ಧೈರ್ಯ ಇವರಲ್ಲಿ ಎದ್ದು ಕಾಣುತ್ತದೆ.

ಕೊಂದು ಮಾಡುವ ಭಕ್ತಿಯುಂಡವನು
ಆನೊರೆವೆ
ಗಂಧದ ಮರನ ಸರಿಸುಟ್ಟು ಇದ್ದಿಲನು
ತಂದು ಬಡಿದಂತೆ ಸರ್ವಜ್ಞ—

ಎಂದು ಸರ್ವಜ್ಞ ಹಿಡಿದಿದ್ದಾನೆ.

ಆತ್ಮಶುದ್ಧಿಲೇನಿ ಯಾಚಾರ ಮದಿಯೇಲ
ಭಾಂಡ ಶುದ್ಧಿಲೇನಿ ಪಾಕಮೇಲ
ಚಿತ್ತಶುದ್ಧಿಲೇನಿ ಶಿವಪೂಜಲೇಲರಾ?"

ಆತ್ಮ ಶುದ್ಧಿಯಿಲ್ಲದೆ ಮಾಡುವ ಅಚಾರ ವ್ಯರ್ಥ, ಪಾತ್ರೆಯನ್ನು ಶುದ್ಧಿಮಾಡದೆ ಅಡಿಗೆ ಮಾಡಿದ ಹಾಗೆ. ಚಿತ್ತಶುದ್ಧಿಯಿಲ್ಲದೆ ಮಾಡಿದ ಶಿವಪೂಜೆಯು ದಂಡ. ಕೇವಲ ಯಜ್ಞ ಯಾಗಾದಿಗಳೇ ಪ್ರಾಣಿಬಲಿ ಮುಂತಾದ ಹತ್ಯೆಗಳೇ ನಮ್ಮಮತವಲ್ಲ. ಒಂದು ವೇಳೆ ಅವು ಹಾಗೆಯೇ ಇದ್ದರೆ, ಯಾವ ಬದಲಾವಣೆಯನ್ನೂ ತಾಳದಿದ್ದರೆ—

"ಕೊಲುವ ಧರ್ಮವನೊಯ್ದು ಒಲಿ
ಯೊಳಗೆ ಇಕ್ಕು!

—ಎಂದು ಸರ್ವಜ್ಞನೂ

ಬ್ರಹ್ಮಚರ್ಯಮಹಿಂಸನಾ ಬರಗು ಪರಮ
ಧರ್ಮಮುಲು ರೆಂಡು ಸುವ್ವೆ ಯುತ್ತಮ
ತಪಂಬು
ದಾನಿಗಲವಾಡು ನಿರ್ಮಲ ಜ್ಞಾನಯೋಗ
ವಂತುಡೈ ಜೂಡನೇರ್ಚು ಸರ್ವಂಬು
ವೇಮ"

ಅಂದರೆ ಬ್ರಹ್ಮಚರ್ಯ, ಅಹಿಂಸೆ ಇವೆರಡೇ ಪರಮ ಧರ್ಮಗಳು. ಅವುಗಳನ್ನು ಸಾಧಿಸುವುದೇ ಪರಮ ತಪಸ್ಸು. ಅದನ್ನು ಉಳ್ಳವನು ನಿರ್ಮಲ ಜ್ಞಾನಿಯಾಗಿ ಸಮಸ್ತ ಸನ್ಯಾಸಿಯಾಗುವನು. ಇದೇ ಎಲ್ಲ ಧರ್ಮಗಳ ಸಾರ ಎನ್ನುತ್ತಾನೆ ವೇಮನ.

"ಎಲುವಿಲ್ಲ ನಾಲಗೆಗೆ, ಬಲವಿಲ್ಲ ಬಡ
ವಂಗೆ
ತೊಲೆ ಕಂಬವಿಲ್ಲ ಗಗನಕ್ಕೆ; ದೇವರಲಿ
ಕುಲಭೇದವಿಲ್ಲ"—

ಎಂದು ಸರ್ವಜ್ಞನು ತೀರ್ಪಳಿಕೆ ನೀಡಿದ್ದಾನೆ.

ಮಾನವನು ಜಾತಿ-ಮತ ಭೇದ ಭಾವನೆ ತಾಳಿದರೆ ಜನರ ಪರಿಸ್ಥಿತಿ ಏನಾಗುವುದೆಂಬುದನ್ನು ವೇಮನ ಪರಿಣಾಮಕಾರಿಯಾಗಿ ಹೇದ್ದಾನೆ.

"ಮರ್ಮಮೆರುಗಲೇಕ ಮತಮುಲ
ಕಲ್ಪಿಂಚಿ
ಯುರ್ವಿ ದುಃಖುಲಗುದು ರೊಕರಿ
ಕೊಕರು

ಗಾನಿಯಿಂಟ ಕುಕ್ಕ ಕಳವಳಸಡು ರೀತಿ"

ತತ್ವ ರಹಸ್ಯವನ್ನು ಅರಿಯದೆ ಭಿನ್ನಮತಗಳನ್ನು ಕಲ್ಪಿಸಿಕೊಂಡು ಪ್ರಪಂಚದಲ್ಲಿ—ನಾಯಿ ಶತ್ರುವಿನ ಮನೆಸೇರಿ ಕಳವಳಕ್ಕೀಡಾಗುವಂತೆ ಜನ ದುಃಖಿಗಳಾಗುತ್ತಾರೆ, ಎನ್ನುತ್ತಾನೆ, ವೇಮನ. ಇವರಿಬ್ಬರೂ ಪಕ್ಷಾತೀತರಾಗಿ ವಿಮರ್ಶಿಸಿದರೂ, ಸತ್ಯಾನ್ವೇಷಣಾ ದೃಷ್ಟಿಯೂ ಇದೆ. ಅಂದರೆ ಮಾನವನು ಸೌಶೀಲ್ಯಕ್ಕೆ ಮಾನ್ಯತೆ ಕೊಡಬೇಕು. ಏಕೆಂದರೆ;

"ಕಣ್ಣು ನಾಲಿಗೆ ಮನವು ತನ್ನದೆಂದನ
ಬೇಡ
ಅನ್ಯರು ಕೊಂದರೆನಬೇಡ ಇವು ಮೂರು
ತನ್ನ ಕೊಲ್ಲುವುವು ಸರ್ವಜ್ಞ"—

ಎಂದು ಸರ್ವಜ್ಞನು ನಡೆನುಡಿಯ ಬಗ್ಗೆ ಜಾಗೃತರಾಗ ಬೇಕೆನ್ನುತ್ತಾನೆ. ವೇಮನನಾದರೋ

"ಮಾಟಲೆಲ್ಲ ಕಲ್ಲ ಮನಸೆಲ್ಲ ದೊಂಗಯಾ
ನೇಟಿ ಪ್ರಾಣಮಿಂಕ ನೇಟಿ ಬ್ರದುಕು!
ಮಾಟ ಸತ್ಯಮೈನ ಮರಿ ಶತಾಯು
ಷ್ಯಂಬು

(23 ನೇ ಪುಟ ನೋಡಿ)

# ನಮ್ಮ ಸಂಸ್ಥೆ



ದೆಹಲಿಯ ಫಲಪುಷ್ಪ ಪ್ರದರ್ಶನದಲ್ಲಿ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು ತಿ.ತಿ.ದೇ. ಉಪವನ ವಿಭಾಗದ ಅಂಗಳಕ್ಕೆ ಆಗಮಿಸಿದಾಗ

ಪ್ರದರ್ಶನದಲ್ಲಿ ಪುಷ್ಪಗಳಿಂದ ನಿರ್ಮಿಸಲಾದ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಇತರ ಭಾವಚಿತ್ರಗಳು.



# ತಿ. ತಿ. ದೇ. ಉಪ

ತಿರುಪತಿ - ತಿರುಮಲೆಗೆ ಬರುವ ಯಾತ್ರಿಕರು ಸಾಮಾನ್ಯವಾಗಿ ಇಲ್ಲಿನ ಸೆಖೆಯನ್ನು ಕುರಿತು ಹೇಳುವುದುಂಟು. ಯಾವುದೇ ನದಿಯೂ ಹರಿಯದ; ಪೂರ್ವಪಶ್ಚಿಮ ಘಟ್ಟಗಳ ಸಂಗಮ ಸ್ಥಾನವಾದ ಈ ಪ್ರದೇಶದಲ್ಲಿ ವರ್ಷಕ್ಕೆ ಸರಾಸರಿ 84 ಸೆ. ಮೀ. ಮಳೆಯಾಗುತ್ತದೆ. ಕೆಂಪುಕಂದು ಬಣ್ಣದ ನೆಲ ಹಬೆಯನ್ನೇ ಹೆಚ್ಚು ಹೊರಸೂಸುತ್ತದೆ. ಆದರೂ ತಿರುಪತಿಯ ಆವರಣವನ್ನು ಪ್ರವೇಶಿಸುತ್ತಿದ್ದಂತೆಯೇ ಯಾತ್ರಿಕರನ್ನು ಅಲ್ಲಲ್ಲಿನ ಹಸಿರು ಚಿಗುರು ತಂಪನ್ನೆರೆಯುತ್ತ ಕರೆಯುವುದು. ತಿರುಮಲೆಗೆ ಕಾಲುದಾರಿಯಲ್ಲಿ ಹೊರಟಾಗಲಂತೂ 'ಗಂಧಗಿರಿಶಿಖರ'ವನ್ನು ಏರುತ್ತಿರುವಂತೆ ಭಾಸವಾಗಿ ಬೆಟ್ಟದ ಮೇಲಿನ ಸುಮತಲಕ್ಕೆ ಬಂದಾಗ ಒಂದು ಉದ್ಯಾನವನ ನಗರಕ್ಕೆ ಬಂದಂತೆ ಭಾಸವಾಗುವುದು. ಇದಕ್ಕೇ ಕಾರಣ ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಗೆ ಹತ್ತಿರವಾಗುವ ಭಕ್ತರ ಆತ್ಮೋನ್ನತಿಯೊಂದಿಗೇ ಮಿಳಿತವಾದ ವಾತಾವರಣದ ಸೌಂದರ್ಯ. ಈ ಸೌಂದರ್ಯದ ಮೂಲ ತಿ. ತಿ. ದೇ. ಗಳ ಉದ್ಯಾನವನ ಇಲಾಖೆ.

1960 ರಲ್ಲಿ ತಿರುಮಲೆಯನ್ನು ಸಂದರ್ಶಿಸಿದ ಆಗಣ ಆಹಾರ ಹಾಗೂ ಕೃಷಿ ಇಲಾಖಾ ಉಪ ಮುಖ್ಯಮಂತ್ರಿ ದಿ॥ ಎಂ. ವಿ. ಕೃಷ್ಣಪ್ಪನವರ ಆಸಕ್ತಿಯಿಂದಾಗಿ ತಿ. ತಿ. ದೇ. ತನ್ನದೇ ಆದ ತೋಟಗಾರಿಕಾ ವಿಭಾಗವನ್ನು ಹೊಂದಲು ನಿರ್ಧರಿಸಿತು. ಆಗಣ ಮೈಸೂರು ತೋಟಗಾರಿಕಾ ಇಲಾಖೆಯ ನಿರ್ದೇಶಕ ಶ್ರೀ ಮರಿಗೌಡರು ತಿ. ತಿ. ದೇ. ತೋಟಗಾರಿಕಾ ಇಲಾಖೆಯ' ಪ್ರಾಥಮಿಕ ಯೋಜನೆಯನ್ನು ಸಿದ್ಧಪಡಿಸಿದರು. ಇದರ ಮುಖ್ಯಉದ್ದೇಶ ತಿ. ತಿ. ದೇವಸ್ಥಾನಗಳ ಎಲ್ಲ ದೇವಾಲಯಗಳಿಗೂ ಅಗತ್ಯವಾದ ಪೂಜೆಯ ಹೂವುಗಳ ಬೆಳೆಯುವಿಕೆ ಹಾಗೂ ಪರಿಸರವನ್ನು ಸುಂದರಗೊಳಿಸುವಿಕೆ. 1960 ರಲ್ಲಿ 8 ಎಕರೆ ಹೂವಿನ ತೋಟದಿಂದ ಆರಂಭವಾದ ತಿ. ತಿ. ದೇ. ಉದ್ಯಾನಗಳು ಅಂದು ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯಕ್ಕೆ ದಿನಂಪ್ರತಿ 12 ಕಿಲೋ ಹಾಗೂ ಇತರ ದೇವಾಲಯಗಳಿಗೆ 8 ಕಿಲೋ ಹೂವುಗಳನ್ನು ನೀಡುತ್ತ ಇಂದು ದಿನಂಪ್ರತಿ 125 ಕಿಲೋಗಳಿಗೂ ಹೆಚ್ಚಾಗಿ ಹೂವುಗಳನ್ನು ನೀಡುತ್ತಿದೆ.

ಇದು ತಿ. ತಿ. ದೇ. ಗಳ ದಿನನಿತ್ಯದ ಅಗತ್ಯದ 5% ಮಾತ್ರ. ಗುಲಾಬಿ, ಮಲ್ಲಿಗೆ, ಮರುಗ,
9

ಧವನ, ಸಂಪಿಗೆ, ಸೇವಂತಿಗೆ, ಸುಗಂಧರಾಜ, ಗನ್ನೇರಿ ಹೂಗಳನ್ನು ಈ ತೋಟಗಳಲ್ಲಿ ಬೆಳೆಯಲಾಗುವುದು. ಎಲ್ಲ ಮೂಲವಿಗ್ರಹಗಳಿಗೂ, ಉತ್ಸವ ವಿಗ್ರಹಗಳಿಗೂ ಈ ಹೂವಿನದೇ ಕೈಂಕರ್ಯ. 1968 ರಲ್ಲಿ ಶ್ರೀ ಚಂದ್ರಮೌಳಿರೆಡ್ಡಿಯವರು ಕಾರ್ಯ ನಿರ್ವಹಣಾಧಿಕಾರಿಗಳಾದಾಗ ದೇವಸ್ಥಾನದ ಒಳ ಹೊರಗಣ ಪುಷ್ಪಾಲಂಕರಣಕ್ಕೆ ಅವಧಾರಣೆ ನೀಡಿದರು. ಉತ್ಸವ ಮೂರ್ತಿಯನ್ನು (ಮಲೆಯಪ್ಪಸ್ವಾಮಿ) ದೇವಸ್ಥಾನದಿಂದ ಮೊದಲ ಬಾರಿಗೆ ಹೊರಗೆ ತಂದು (ಬ್ರಹ್ಮೋತ್ಸವ ಸಂದರ್ಭದಲ್ಲಿ) ಊಂಜಲ್ ಸೇವೆಯನ್ನು ಏರ್ಪಡಿಸಿ ಅತಿಹೆಚ್ಚು ಜನ ಭಕ್ತರು ಈ ದಿವ್ಯ ದೃಶ್ಯವನ್ನು ಕಣ್ಣಣಿಯೆ ನೋಡಿ ನಲಿಯಲು ಅನುಕೂಲ ಮಾಡಿಕೊಟ್ಟರು. ಆಗಿನಿಂದ ದೇವಸ್ಥಾನದ

# ವನ ವಿಭಾಗ

ಹೊರಗೆ ಹೂವಿನ ಅಲಂಕರಣ ಹೆಚ್ಚು ಪರಿಶೋಭಿಸತೊಡಗಿ ಗಾಳಿ ಗಂಧಮಯವಾಗ ತೊಡಗಿತು. ನಂತರ ಅನೇಕ ದೇವತೆಗಳನ್ನು ಹೂವಿನಲ್ಲಿ ಕುಸುರಿಗೆಲಸದ ಮೂಲಕ ಚಿತ್ರಿಸಿ ಭಕ್ತ ಭಾವವನ್ನು ಔನ್ನತ್ಯಗೊಳಿಸಲಾಗುತ್ತಿದೆ. ಈಗ ವರ್ಷಕ್ಕೆ 160 ದಿನಗಳಿಗೂ ಮಿಗಿಲಾದ ಉತ್ಸವಗಳಲ್ಲಿ ಈ ಕುಸುರಿಗೆಲಸದ ಪ್ರತಿಭಾವಿಲಾಸವನ್ನು ನೋಡಬಹುದಾಗಿದೆ. ವಿಶೇಷ ರೀತಿಯ ಹಾರ ತುರಾಯಿಗಳ ನಿರ್ಮಾಣ, ದೇವ ದೇವತೆಗಳ ಅಲಂಕರಣ ಸ್ವಾಗತ ಕಮಾನುಗಳ ಅಲಂಕರಣ ಮೊದಲಾದುವನ್ನು ಇರುವ ಉದ್ಯೋಗಿಗಳ ಮೂಲಕವೇ ಮಾಡಿಸಲಾಗುತ್ತದೆ ಎಂಬುದೊಂದು ಹೆಮ್ಮೆಯ ಅಂಶ. ವರ್ಷದುದ್ದಕ್ಕೂ ಆಗಾಗ ಬರುವ ಉತ್ಸವ ಕಾರ್ಯಕ್ರಮಗಳಿಗೆ ಬೇಕಾಗುವ ಹೂವಿನ ಸ್ವಲ್ಪ ಭಾಗವನ್ನು ಹೊರಗಣ ಮಾರುಕಟ್ಟೆಯಿಂದ ಕೊಂಡು ಕೊಳ್ಳಲಾಗುತ್ತದೆ ಅಥವಾ ದಾನಿಗಳಿಂದ ಸ್ವೀಕರಿಸಲಾಗುತ್ತದೆ. ಕಾರಣ ಹಲವಾರು ಹೂವಿನ ಕಾಲಿಕ ಉತ್ಪಾದನೆ, ಉತ್ಸವಗಳಲ್ಲಿನ ಹೆಚ್ಚಿನ ಬೇಡಿಕೆ, ಹಾಗೂ ನೀರಿನ ಅಭಾವ. ಆದರೆ ನೀರಿನ ಅಭಾವ ಗೋಗರ್ಭದ ಅಣೆಕಟ್ಟು ಕಲ್ಯಾಣಿ ಅಣೆಕಟ್ಟುಗಳ ನಂತರ ನಿವಾರಿಸಲ್ಪಡುವುದೆಂದು ಅಂದಾಜು. (ಸುಮಾರು ಒಂದೆರಡು ವರ್ಷ) ಸಧ್ಯಕ್ಕೆ ದೇವಾಲಯಗಳ ದೈನಂದಿನ ಅಗತ್ಯಗಳನ್ನು ಪೂರೈಸಲು ಎಲ್ಲ ಪ್ರಯತ್ನವನ್ನು ಕೈಗೊಂಡು ಪದ (ಗಿಡ) ದಿಂದ ಪುಷ್ಪವನ್ನು ಪಾದಕ್ಕೆ (ದೇವರ ತಿರುವಡಿಗಳಿಗೆ) ನೇರವಾಗಿ ನಿವೇದಿಸಲಾಗುತ್ತಿದೆ.



ಶ್ರೀನಿವಾಸ ಮಂಗಾಪುರದಲ್ಲಿ ಈ ವರ್ಷ ಆರಂಭವಾದ ಬ್ರಹ್ಮೋತ್ಸವಗಳಲ್ಲಿನ ಚಂದ್ರಪ್ರಭವಾಹನ. ದೇವರ ಹೂವಿನ ಹಾರಾಲಂಕಾರ ಗಮನಾರ್ಹ.

ಆಂಧ್ರಪ್ರದೇಶದ ಪರವಾಗಿ ಭಾಗವಹಿಸಿದ ತಿ. ತಿ. ದೇ. ಉಪವನ ವಿಭಾಗಕ್ಕೆ ದೆಹಲಿಯ ಫಲ ಪುಷ್ಪ ಪ್ರದರ್ಶನದಲ್ಲಿ ಪ್ರಥಮ ಬಹುಮಾನ. ಶ್ರೀಮತಿ ಹಿದಾಯತುಲ್ಲಾ ಅವರಿಂದ ಬಹುಮಾನ ಸ್ವೀಕರಿಸುತ್ತಿರುವ ಉಪವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ.



# ವಿವಿಧ ಹೆಸರುಗಳ ಕ್ರೋಟನ್‌ಗಳು



ಅಲಂಕಾರಿಕ ಉದ್ಯಾನ ವಿಭಾಗವೂ ಹೆಸರಿಸುವ ಹಿರಿಮೆಯನ್ನು ಹೊಂದಿದೆ. ಪ್ರವಾಸಿ ಮಂದಿರದ ಪರಿಸರ, ಶಂಖುಚಕ್ರ ಉದ್ಯಾನ, ಶಂಕುಮಿಟ್ಟ ಉದ್ಯಾನ, ಗರುಡಾದ್ರಿ ನಗರದ ಗೀಜೋಪಬೇಶ ಉದ್ಯಾನಗಳು ಪೂರ್ಣಪ್ರಮಾಣದ ಉಪವನಗಳಾಗಿ ಯಾತ್ರಿಕರನ್ನು ಆಕರ್ಷಿಸುತ್ತಿವೆ. ಗೋಗರ್ಭದ ಅಣೆಕಟ್ಟೆಯಲ್ಲಿನ ಉದ್ಯಾನವನವನ್ನು ಮೈಸೂರಿನ ಬೃಂದಾವನದಂತೆ ಸುಂದರಗೊಳಿಸಲು ಪ್ರಯತ್ನಗಳು ನಡೆದಿವೆ. ಭೌಗೋಳಿಕ ತೋರಣದ ಪರಿಸರವನ್ನೂ, ಅಂಜನಾದ್ರಿ, ಪದ್ಮಾವತೀ ಅತಿಥಿಗೃಹ ಪ್ರಾಂತ್ಯವನ್ನೂ ಸುಂದರ ಉದ್ಯಾನವನಗಳನ್ನಾಗಿ ಪರಿವರ್ತಿಸಲು ಪ್ರಯತ್ನಗಳು ನಡೆದಿವೆ. ಇಲ್ಲೆಲ್ಲ ಬೆಟ್ಟಗುಡ್ಡಗಳ ನೈಸರ್ಗಿಕ ಮೇಲ್ಮೈ ಲಕ್ಷಣವನ್ನು ಹಾಗೆಯೇ ಉಳಿಸಿಕೊಂಡು ಹುಲ್ಲಿನ ಹಾಸು, ಮರಗಿಡ ಬಳ್ಳಿಗಳ ಮಂಟಪಗಳು, ನೆರಳು ನೀಡುವ ವೃಕ್ಷಗಳನ್ನೂ ಬೆಳೆಸುತ್ತ ಪುಷ್ಪ ತರುಗಳನ್ನು ಭಾರತದ ಎಲ್ಲ ಭಾಗಗಳಿಂದಲೂ ಆಯ್ದು ತಂದು ಬೆಳೆಸಲಾಗುತ್ತಿದೆ. ಸುಮಾರು 50,000 ಕ್ರೋಟನ್ ಗಿಡಗಳನ್ನು ಕುಂಡಗಳಲ್ಲಿ ಬೆಳೆಸಲಾಗುತ್ತಿದೆ. ಇಲ್ಲಿನ ವೈಶಿಷ್ಟ್ಯವೆಂದರೆ ಕಸಿಮಾಡಿದ ಕ್ರೋಟನ್‌ಗಳು. ವಿವಿಧ ಅಳತೆಗಳ ವಿವಿಧ ಆಕರ್ಷಕ ವರ್ಣಗಳ ಹೂವು, ಎಲೆಗಳಿಂದ ಕೂಡಿ ಎಂಥದೇ ಪರಿಸರಕ್ಕೂ ಶೋಭೆಯನ್ನು ನೀಡುವ ಅಸಂಖ್ಯ ಕ್ರೋಟನ್‌ಗಳನ್ನು ಬೆಳೆಸಿ ಹಲವಾರು ದೇವತೆಗಳ, ಹಿರಿಯರ ಹೆಸರುಗಳನ್ನು ನೀಡಲಾಗುತ್ತಿದೆ. ಅನ್ನಮಾಚಾರ್ಯ, ಪುರಂದರದಾಸ, ತ್ಯಾಗರಾಜ, ಸಪ್ತಗಿರಿ ಮೊದಲಾದವು ಹಲವು ಹೆಸರುಗಳು ಮಾತ್ರ. ಈ ಕಸಿ ಮಾಡುವ ಕೃಷಿಯು ಭಾರತಾದ್ಯಂತ ಕೃಷಿ ಪಂಡಿತರ ಶ್ಲಾಘನೆ ಪಡೆದಿದೆ. ಹೊಸ ಹೊಸ ಬಗೆಯ ಗಿಡಗಳನ್ನು ಪ್ರಪಂಚದ ಎಲ್ಲೆಡೆಗಳಿಂದ ತರಿಸಲು ಪ್ರಯತ್ನಿಸಲಾಗುತ್ತಿದೆ. ಈ ಪ್ರಯತ್ನದಲ್ಲಿ ಬೆಂಗಳೂರಿನ ಪುಷ್ಪಕಾಶಿ ಲಾಲ್‌ಭಾಗ್‌ನ ಅಧಿಕಾರಿಗಳು ಹಾಗೂ ಡಾ॥ ಮರಿಗೌಡರು ಇಂದೂ ನೆರವಿನ ಸೆಲೆಯಾಗಿದ್ದಾರೆ.

ದೇವಾಲಯದ ದಾರಿಯಲ್ಲಿ ಅನೇಕ ಹೂವಿನಗಿಡಗಳನ್ನು ಬೆಳೆಸಿ ವರ್ಷದ ಎಲ್ಲಕಾಲದಲ್ಲೂ ಒಂದಲ್ಲ ಒಂದು ಹೂವಿನ ಸುಗಂಧ ಹರಡಿರುವಂತೆ ಮಾಡಲಾಗಿದೆ. ಫೆಬ್ರವರಿಯಿಂದ ಸೆಪ್ಟಂಬರ್ ವರೆಗೆ ರಸ್ತೆಗಳಲ್ಲಿ ಸಂಪಿಗೆಯ ಸುವಾಸನೆ ಹರಡಿರುವುದನ್ನು ಆಘ್ರಾಣಿಸುವುದು ಸುಲಭ.

ತಿ. ತಿ. ದೇ. ತೋಟಗಾರಿಕಾವಿಭಾಗ ಅನೇಕ ಫಲಪುಷ್ಪ ಪ್ರದರ್ಶನಗಳಲ್ಲೂ ಭಾಗವಹಿಸಿ ಅತಿ ಹೆಚ್ಚಿನ ಬಹುಮಾನಗಳನ್ನು ಪಡೆದು ಪ್ರಶಂಸೆಗೆ ಪಾತ್ರವಾಗಿದೆ. ಅದರ ಹಿರಿಮೆಯ ಹೊಸಗರಿ ಎಂದರೆ ಹಿಂದಿನ ತಿಂಗಳ ಮಧ್ಯದಲ್ಲಿ ದೆಹಲಿಯಲ್ಲಿ ನಡೆದ ಫಲಪುಷ್ಪ ಪ್ರದರ್ಶನ. ದೆಹಲಿಯ ವೈ.ಎಂ.ಸಿ.ಎ. ಯವರು ಯೋಜಿಸಿದ ಈ ಪ್ರದರ್ಶನದಲ್ಲಿ ತಿ. ತಿ. ದೇ. ತೋಟಗಾರಿಕಾ ವಿಭಾಗ ತನ್ನ ಸುಮಾರು 1400 ಕ್ಕೂ ಮಿಗಿಲಾದ ವಿವಿಧಬಗೆಯ ಗುಲಾಬಿ ಹೂವುಗಳಿಂದಲೂ, ಅನೇಕ ಅಲಂಕರಣಗಳಿಂದಲೂ ವೈವಿಧ್ಯಮಯವಾದ ನೇತ್ರಾನಂದಕರವಾದ ದೃಶ್ಯವನ್ನೊದಗಿಸಿ ಮೊದಲ ಬಹುಮಾನವನ್ನೂ ಛಾಲೆಂಜ್ ಕಪ್‌ಅನ್ನೂ ಪಡೆಯಿತು. ಸ್ಪರ್ಧೆಯ ನ್ಯಾಯನಿರ್ಣಯಗಾರರಾದ ಪ್ರಖ್ಯಾತ ಕೃಷಿ ಪಂಡಿತರು ಡಾ॥ ಪಾಲ್, ಡಾ॥ ರಣದಿವೆ ಮೊದಲಾದವರೂ ಸಂಯೋಜಕರ ಪರವಾಗಿ ಶ್ರೀಮತಿ ಎಲಿಜಬೆತ್ ಥಾಂಸನ್ ಅವರೂ ಮುಕ್ತಕಂಠದಿಂದ ವಿಭಾಗವನ್ನು ಶ್ಲಾಘಿಸಿದರು. ಒಂದು ವಿಶೇಷವೆಂದರೆ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಅವರು ಪ್ರದರ್ಶನಕ್ಕೆ ಅನಿರೀಕ್ಷಿತ ಭೇಟಿ ನೀಡಿ ಆನಂದದಿಂದ 25 ನಿಮಿಷಗಳ ಕಾಲ ಅಲ್ಲಿನ ವೈವಿಧ್ಯಮಯ ಸೌಂದರ್ಯವನ್ನು ದರ್ಶಿಸಿದ್ದೇ ಅಲ್ಲದೆ 'ಪ್ಲಾಂಟ್ ವೆಲ್ತ್ ಆಫ್ ತಿರುಮಲ' ಎಂಬ ಪುಸ್ತಕವನ್ನೂ ಬಿಡುಗಡೆ ಮಾಡಿದರು.

ಸುಮಾರು ಮುನ್ನೂರು ಜನ ಉದ್ಯೋಗಿಗಳಿರುವ ವಿಭಾಗಕ್ಕೆ ಹಿರಿಯರು ಶ್ರೀ ತಮ್ಮಣ್ಣ. ಕರ್ನಾಟಕದ ತೋಟಗಾರಿಕೆಯಲ್ಲಿ ಪಳಗಿ ಅನುಭವ, ಕಲ್ಪನೆ, ಹೊಂದಿದ ಇವರು 1961 ರಲ್ಲಿ ತಿ. ತಿ. ದೇ. ತೋಟಗಾರಿಕಾ ವಿಭಾಗದ ಅಧಿಕಾರಿಯಾಗಿ ಅದರ ಇತೋಪ್ಯತಿಶಯ ಅಭಿವೃದ್ಧಿಗೆ ಅಹರ್ನಿಶಿ ಶ್ರಮಿಸುತ್ತಿದ್ದಾರೆ. ಎಲ್ಲ ಕಾರ್ಯನಿರ್ವಹಣಾಧಿಕಾರಿಗಳೂ ಈ ವಿಭಾಗಕ್ಕೆ ಪ್ರೋತ್ಸಾಹ ನೀಡಿದವರೇ ಆದರೂ ಪ್ರಮುಖವಾಗಿ ಕಮೀಶನರ್ ಶ್ರೀ ಚಂದ್ರಮೌಳಿರೆಡ್ಡಿ ಹಾಗೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದರ ಹೆಸರುಗಳನ್ನು ಹೇಳಬೇಕು. ಶ್ರೀ ಪಿ.ವಿ.ಆರ್.ಕೆ. ಪ್ರಸಾದರ ಆಗಮನಾನಂತರ ಅನೇಕ ಹಲವು ಯೋಜನೆಗಳು ಉಂಟಾಗಿವೆ. ಗರುಡಾದ್ರಿ ನಗರ, ಅಂಜನಾದ್ರಿನಗರ, ಭೌಗೋಳಿಕ ತೋರಣಗಳ ಉದ್ಯಾನವನಗಳು ದೇವಾಲಯಗಳ ಹೊರಗಣ ಬೆಳವಣಿಗೆಗಳಾದರೆ ನಾಗಲಾಪುರ, ನಾರಾಯಣವನಗಳ ಬ್ರಹ್ಮೋತ್ಸವಗಳು ದೇವಸ್ಥಾನಗಳ ಭಕ್ತರ–ನಡುವಣ ನೇರ ಬೆಳವಣಿಗೆಗಳು. ಜೊತೆಗೆ ಈ ವರ್ಷ ಆರಂಭವಾದ ಪುಷ್ಪಯಾಗ, ಶ್ರೀನಿವಾಸ ಮಂಗಾಪುರದ ಬ್ರಹ್ಮೋತ್ಸವಗಳು ಶ್ರೀಯುತರ ಆಸಕ್ತಿಯ ಆಳವನ್ನೂ ಬೆಳೆಯುತ್ತಿರುವ ತಿ.ತಿ.ದೇ ತೋಟಗಾರಿಕೆ ವಿಭಾಗದ ಹಿರಿಮೆಯನ್ನೂ ಅವಧಾರಿಸುತ್ತವೆ.

**ಬಿ. ಎನ್. ಶ್ರೀನಿವಾಸನ್**

(19 ನೇ ಪುಟದಿಂದ)

ಎಂದರೆ ; ಮಾತುಗಳಲ್ಲಿ ಸುಳ್ಳು; ಮನಸ್ಸಿನಲ್ಲಿ ಕಳ್ಳತನ, ಹೀಗಾದರೆ ಇನ್ನೇತರ ಪ್ರಾಣ, ಇನ್ನೇತರ ಬಾಳುವೆ! ಮಾತು ಸತ್ಯವಾದರೆ ಮತ್ತೆ ಶತಾಯುಷ್ಯ—ಎಂದು ಜನರ ಕಪಟ, ವಂಚನೆ ಇತ್ಯಾದಿಗಳನ್ನು ಕಂಡು ಮರುಕದಿಂದಲೇ ನುಡಿದಿದ್ದಾನೆ.

ಮಾನವನ ಪುರುಷಾರ್ಥಗಳಲ್ಲೊಂದಾದ ಕಾಮ ಪೂರೈಕೆಯಾಗಬೇಕಾದದ್ದೂ ಧರ್ಮದ ಹಾದಿಯಲ್ಲಿ. ವೇಶ್ಯೆಯರ ಸಹವಾಸ ಯೋಗ್ಯವಲ್ಲ— ಏಕೆಂದರೆ

ಹಿಂದೆಲಗ ಮೆಲಹೊಲ್ಲ ನಿಂದಕನ ನೆರೆ ಹೊಲ್ಲ
ತಂದೆಯನು ಜರಿವ ಮಗ ಹೊಲ್ಲ ಸೂಳೆಯ
ದಂದುಗವೆ ಹೊಲ್ಲ ಸರ್ವಜ್ಞ''

ಎಂದು ಸರ್ವಜ್ಞನು ವೇಶ್ಯಾಸದ್ಧತಿಯನ್ನು ಖಂಡಿಸಿದ್ದಾನೆ. ವೇಮನನಂತೂ—

ತೊತ್ತು ತೋಟಿಪೊಂದು ದೋಷಂಬು ದೋಷಂಬು
ಲಂಜ ತೋಟಿಪೊಂದು ಲಜ್ಜ ಚೆಡುನು
ಜಾರ ತೋಟಿ ಪೊಂದು ಚಾವುಕು ಮೂಲಮು''

ದಾಸಿಯ ಸಂಗಡ ಸ್ನೇಹ, ದೋಷ, ಲಜ್ಜೆಗೇಡು, ಸಾವಿಗೆ ಮೂಲ ಎಂಬ ಭೀಕರತೆಯ ನುಡಿಯನ್ನೇ ಹೇಳಿ ಬಿಟ್ಟಿದ್ದಾನೆ.

"ಗೃಹಿಣೀ ಗೃಹಮುಚ್ಯತೇ'' ಎಂಬ ನುಡಿ ಬಹಳ ಅರ್ಥಗರ್ಭಿತವಾದುದು. ಆಕೆ ಮನೆಯವರೆಲ್ಲರ ಪ್ರೀತಿ ವಿಶ್ವಾಸ ಗಳಿಸಿ ಮನೆ ಬೆಳಗಬೇಕು. ಇಂಥ ಗೃಹಿಣಿಯರು ಹೇಗಿರಬೇಕೆಂಬುದನ್ನು ನಿರ್ದೇಶಿಸಿದ್ದಾರೆ. ಇಚ್ಛೆಯನರಿಯುವವಳೂ ಹಾಗೂ ಸುಗುಣವತಿಯಾದ ಹೆಂಡತಿ ಇದ್ದರೆ ಮನುಷ್ಯ ಸ್ವರ್ಗವೇ ಕೈಗೆಟುಕಿದಷ್ಟು ಹಿಗ್ಗಿ ನಲಿಯಬಹುದು. ಆದರೆ ಅದೇ ಆಕೆ ಪ್ರತಿಕೂಲಳಾದರೆ ಆಗ ಸಂಸಾರಕ್ಕೆ ಒದಗುವ ಆಘಾತ, ಗಂಡ ಹೆಂಡಿರ ವಿರಸವನ್ನು ಸ್ವಾರಸ್ಯವಾದ, ಹೋಲಿಕೆಯ ಮೂಲಕ ಸಮರ್ಥವಾಗಿ ಚಿತ್ರಿಸಿದ್ದಾರೆ—

ಜುಜ್ಜುವಾ ಕೆರದಿಂದ ಕಜ್ಜುವಾ ಶುನಿ ಲೇಸು
ನಿಜ್ಜಲು ಉಲಿವ ಸತಿಯಿಂದ ಉರಿದಿರ್ದ
ಕಿಚ್ಚುತಾ ಲೇಸು ಸರ್ವಜ್ಞ''

ಎಂಬುದು ಸರ್ವಜ್ಞನ ಅಭಿಪ್ರಾಯ.

ವೇಮನನು—

ಚೆಪ್ಪುಲೋನಿ ರಾಯಿ ಚೆವಿಲೋನಿಜೋರೀಗ
ಕಂಟಿಲೋನಿ ನಲುಸು ಕಾಲಿಮುಲ್ಲು
ಇಂಟಿಲೋನಿ ಪೋರು ಇಂತಂತ ಗಾದಯಾ''—

ಎಂದಿದ್ದಾನೆ.

ಜಗಳಗಂಟಿಯಾದ ಸತಿಯ ವರ್ತನೆ, ಚಪ್ಪಲಿಯೊಳಗೆ ಸೇರಿಕೊಂಡ ಕಲ್ಲು, ಕಿವಿಯೊಳಗೆ ಹೊಕ್ಕನೊಣ, ಕಣ್ಣೊಳಗಿನ ಕಸ, ಕಾಲಿಗೆ ಚುಚ್ಚಿರುವ ಮುಳ್ಳು ಇವುಗಳಿಂದಾಗುವ ಹಿಂಸೆ ಎಷ್ಟು ಅಸಹನೀಯ, ಎಂದು ತಿಳಿಸಿದ್ದಾರೆ. ಅಂದರೆ ಹೆಂಡತಿಯಿಂದ ದೂರ ವಿರುವುದೇ ಲೇಸಲ್ಲವೆ? ಎಂದರೆ ಅವರು ಅದಕ್ಕೂ ಒಪ್ಪರು. ಏಕೆಂದರೆ

"ಸುಣ್ಣವಿಲ್ಲದ ವೀಳ್ಯ ಬಣ್ಣವಿಲ್ಲದ ಮದುವೆ
ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ
ಎಣ್ಣೆ ಹೊಯಿದಂತೆ''—

## ಸಪ್ತಗಿರಿವಾಸ

ಸಪ್ತಗಿರಿವಾಸ ಶ್ರೀ ಶ್ರೀನಿವಾಸ
ನಿತ್ಯ ಕಲ್ಯಾಣಮೂರ್ತಿ ಶ್ರೀವೆಂಕಟೇಶ
ಮೂರುನಾಮದ ಮೂರ್ತಿ ಮುದ್ದು ವೆಂಕಟರಮಣ
ನಿನ್ನ ಭಕ್ತರ ಮೇಲೆ ಬಾರದೆ ಕರುಣ

ವೈಕುಂಠಪತಿ ನೀನು ಭಕ್ತ ಬಾಂಧವ ನೀನು
ಮೋಕ್ಷದಾಯಕ ನೀನು ದೀನ ಬಂಧುವು ನೀನು
ಹೇ! ಶ್ರೀನಿವಾಸನೆ ಹೇ! ತಿರುಮಲೇಶ
ಕರುಣಾಳು ಶಿವ ನೀನು ಕೃಪಾಳು ಶ್ರೀಹರಿ ನೀನು

ಸಕಲ ಜೀವಿಗಳ ಒಡೆಯನು ನೀನು
ಅಡಿಗಡಿಗೆ ಅನ್ನವೀಯುವವ ನೀನು
ಅಖಿಲಾಂಡವೀರನೆ ಆದಿನಾರಾಯಣ
ನಿನ್ನ ಭಕ್ತರಿಗೆಲ್ಲ ನೀಡು ನೀ ಕಲ್ಯಾಣ

ಸಾಲಾಗಿ ನಿಂತಿರುವ ನಿನ್ನ ಭಕ್ತ ವೃಂದ
ಧ್ಯಾನ ಮಾಡುತಲಿಹುದು ನಿನ್ನ ಗೋವಿಂದ
ಹೇ! ಲಕ್ಷ್ಮೀರಮಣ ಹೇ! ವೆಂಕಟರಮಣ
ನಿನ್ನ ಭಕ್ತರನೊಲಿದು ನೀಡು ನೀ ದರ್ಶನ

ನಿತ್ಯ ಮಂಗಳಮೂರ್ತಿ ನಿಗಮಗೋಚರನೆ
ಅಭಯಪ್ರದಾಯಕನೆ ದಯಾಮಯನೆ
ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನೆ
ಮೊರೆಲಾಲಿಸಿ ಪರಿಪಾಲಿಸೈ ಶ್ರೀ ಹರಿಯೇ

— ಹನುಮಂತಪ್ಪ

# ಸಪ್ತಗಿರಿ

# ಚಂದಾದಾರರಲ್ಲಿ

ವಾರ್ಷಿಕ ಚಂದಾ ರೂ. 6–00

ಸಪ್ತಗಿರಿ ಮಾಸಪತ್ರಿಕೆಯ ಚಂದಾದಾರರುಗಳಲ್ಲಿ ಕೆಳಕಂಡವರ ಚಂದಾಗಳು 31-5-81 ತಾರೀಖಿಗೆ ಮುಗಿಯಲಿವೆ. ಚಂದಾದಾರರು ಸಹಾನುಭೂತಿಯಿಂದ ಹಣವನ್ನು ಮನಿಯಾರ್ಡರು ಮೂಲಕ ಕಳುಹಿಸಿ ಕೊಡಬೇಕೆಂದು ಕೋರುತ್ತೇವೆ. ಚಂದಾದಾರರು ದಯವಿಟ್ಟು ಮನಿಯಾರ್ಡರು ಕೂಪನಿನಲ್ಲಿ ತಮ್ಮ ಚಂದಾ ಸಂಖ್ಯೆಯನ್ನು ನಮೂದಿಸಬೇಕು.

6, 17, 50, 150, 336, 516, 563, 572, 583, 1072, 1073, 1075 to 1081, 1083 to 1094, 1096, 1097

ಚಂದಾ ಹಣವನ್ನು ಎಮ್. ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು. ಚೆಕ್ಕುಗಳನ್ನು ಕಳುಹಿಸಿದ್ದಲ್ಲಿ, ಅಥವಾ ವಿಳಾಸ ತಪ್ಪಿದ್ದಲ್ಲಿ, ಆಗುವ ಆಲಸ್ಯಕ್ಕೆ ಯಾವ ವಿಧದಲ್ಲೂ ಈ ಕಾರ್ಯಾಲಯ ಬಾಧ್ಯತೆ ವಹಿಸಲಾರದು. ಚಂದಾದಾರರೆಲ್ಲರೂ ಸಹೃದಯತೆಯಿಂದ ಚಂದಾ ಕಳುಹಿಸಬೇಕೆಂದು ವಿನಂತಿ. ಮಿಕ್ಕ ವಿವರಗಳಿಗೆ :

ವೆಲ್‌ಫೇರ್ ಆಫೀಸರ್,
ಸೇಲ್ಸ್ ವಿಂಗ್,
ತಿ. ತಿ. ದೇ. ಪ್ರೆಸ್ ಕಾಂಪೌಂಡ್
ತಿರುಪತಿ.

ನಿಷ್ಫಲವೂ, ನೀರಸವೂ, ಬರಡಾದದ್ದೂ ಎಂದು ಸರ್ವಜ್ಞ ಅಭಿಪ್ರಾಯ ಪಡುತ್ತಾನೆ. ಅಲ್ಲದೆ (ಅವಳು) ಸ್ತ್ರೀ, ತ್ರಿಮೂರ್ತಿಗಳಿಗೂ ಹಿರಿಯಳೆಂಬ ಮೆಚ್ಚಿಕೆ ಇವನದು. ಆದರೆ ವೇಮನ ಈ ವಿಷಯದಲ್ಲಿ ಸ್ವಲ್ಪ ಸಿಡುಕುತ್ತಾನೆ. ದೇವತೆಗಳೇ ಹೀಗೆ ಹಾಳಾದರೆ ನಮ್ಮ ಗತಿ ಏನು ಎಂದು ಜಗುಪ್ಸೆಯನ್ನೂ ತಾಳಿ, ನಿಟ್ಟುಸಿರನ್ನೂ ಬಿಡುತ್ತಾನೆ. ಬಹುಶಃ ಹೆಂಗಸಿನ ಅವಾಂತರಕ್ಕೆ ಸಿಲುಕಿದ ಅನುಭವದ ಫಲವಿರಬೇಕು. ಆದರೆ ಎಲ್ಲಿಯೂ ಸ್ತ್ರೀಯನ್ನು ಸೇರಲೇಬೇಡವೆಂದು ತಿಳಿಸಿಲ್ಲ.

ಇದರ ಜೊತೆಗೆ ಮಾನವನು ಜೀವನದಲ್ಲಿ ಅನುಸರಿಸಬೇಕಾದ ನೀತಿ–ನಿಯಮಗಳನ್ನು ತಿಳಿಸಿದ್ದಾರೆ. ಅಲ್ಪರು ಯಾವಾಗಲೂ ಅಟ್ಟಹಾಸದಿಂದ ಮೆರೆಯುವರೇ ಹೊರತು ತುಂಬಿದ ಕೊಡ ಯಾವತ್ತು ತುಳುಕುವುದಿಲ್ಲ ಎಂಬುದನ್ನು ವೇಮನ—

"ಕಂಡು ಪ್ರೋ ಗು ನ ಟ್ಲು ಕನಕಂಬು ಪ್ರೋಗುನಾ"-ಎಂಬುದಾಗಿ ಹೇಳಿದರೆ ಸರ್ವಜ್ಞನು ಇಂಥ ಅಲ್ಪರೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು—

"ಆನೆ ಬೀದಿಲಿ ಬರಲು ಶ್ವಾನ ತಾ ಬೊಗಳುವುದು
ಶ್ವಾನನಂತಾನೆ ಬೊಗಳಿದರೆ ಆನೆಯ
ಮಾನವೇ ಹಾನಿ ಸರ್ವಜ್ಞ"—

ಎಂದು ಬಹಳ ಅರ್ಥವತ್ತಾಗಿ, ತಿಳಿಸಿದ್ದಾನೆ. ಏಕೆಂದರೆ ಹೀನಗುಣದವನು ಎಷ್ಟು ವಿದ್ಯಾವಂತನಾಗಿದ್ದರೂ ಘನನಾಗುವುದಿಲ್ಲ. ಕತ್ತೆ ಬಲ್ಲುದೇ ಹೊತ್ತ ಕತ್ತುರಿಯ ಪರಿಮಳವ ಎಂಬಂತೆ. ಅಲ್ಪರನ್ನು ಬೇಕಾದರೆ ತಿದ್ದಬಹುದು. ಆದರೆ ಕಠಿಣ ಹೃದಯದವರು— ಏನುಮಾಡಿದರೂ ಅರಿಯಲಾರರು, ಮನಸ್ಸು ಬದಲಾಯಿಸಲಾರರು. ಆದರೆ ಅವರಿಗೆ ಯಾವ ಬೆಲೆಯೂ ದೊರಕದು—ಏಕೆಂದರೆ

'ಉದ್ದುರುಟು ಮಾತಾಡಿ ಇದ್ದುದನು ಹೋಗಾಡಿ
ಉದ್ದನ ಮರದಿ ತುದಿಗೇರಿ ಕೈಜಾರಿ
ಬಿದ್ದು ಸತ್ತಂತೆ"—

ಅಪಾರ ನಷ್ಟವೆಂದು ಸರ್ವಜ್ಞ ಎಚ್ಚರಿಸುತ್ತಿದ್ದಾನೆ. ಹಾಗಾದರೆ ನಾವು ಹೇಗೆ ನಡೆದುಕೊಳ್ಳಬೇಕೆಂದರೆ, ಅದರಿಂದಾಗುವ ಲಾಭ ಏನೆಂದರೆ,

'ಗುರುಗಳಿಗೆ ಹಿರಿಯರಿಗೆ ಶಿರಬಾಗಿ ಎರಗಿದರೆ
ನರಸುರರೊಳಿಯು ಸಿರಿ ಸುರಿದು ಕೈಲಾಸ
ಕರತಲಾಮಲಕ 'ಸರ್ವಜ್ಞ'

ಎಂದು ತಿಳುವಳಿಕೆ ನೀಡುತ್ತಿದ್ದಾರೆ

ಹೀಗೆ ಸಮಾಜದ ನಾನಾ ಸಮಸ್ಯೆಗಳನ್ನೂ, ಜನರ ನಡೆ ನುಡಿಗಳನ್ನೂ ಜೀವನದ ಹಲವಾರು ಮುಖಗಳನ್ನು ಕಂಡು, ಅನುಭವಿಸಿ, ಅದರ ಲೋಪಗಳನ್ನು ತಿದ್ದಲು ಹೊರಟಿದ್ದಾರೆ. ಅವರ ನುಡಿ ಕತ್ತೆ ಒದ್ದಂತೆ, ಚಾಟಿಯಿಂದ ಹೊಡೆದಂತೆ ಕಾಠಿಣ್ಯವನ್ನು ಹೊಂದಿದ್ದರೂ, ಅವು ಹಸಿಮಣ್ಣಿನಲ್ಲಿ ಹರಳು ನೆಟ್ಟಂತೆ ಓದುಗರ ಮನದಲ್ಲಿ ಆಳವಾಗಿ ಬೇರೂರಿ ನಿಂತು ತಮ್ಮ ಪರಿಣಾಮ ಬೀರುತ್ತವೆ. ಆದರೂ ಅವರು ಬಳಸಿರುವ ಭಾಷೆ, ಶೈಲಿ ಬಹಳ ಸರಳ, ಅದರಲ್ಲಿನ ಉಪಮಾನಗಳಂತೂ, ಚಿತ್ತಾಕರ್ಷಕವಾದವುಗಳಾಗಿವೆ, ಹೀಗೆ ಇವರಮಾತು 'ಕರಿಯು ಕನ್ನಡಿಯೊಳಡಗಿದಂತೆ' ಎಂಬ ಹಾಗೆ ಕಿರಿದರಲ್ಲಿ ಹಿರಿದಾದ ಅರ್ಥವನ್ನು ತುಂಬಿ, ತುಂಬಿ ಓದುಗರಿಗೆ ನೀಡುತ್ತವೆ. ಚಿಕ್ಕವಾದರೂ ಚೊಕ್ಕವಾಗಿವೆ ಸ್ಪಷ್ಟವಾಗಿವೆ, ಸ್ವಾರಸ್ಯಕರವಾಗಿವೆ, ಹಿತವಾಗಿವೆ. ಅವರಿಬ್ಬರ ಧ್ಯೇಯೋದ್ದೇಶಗಳನ್ನು ಸಮರ್ಥವಾಗಿ ಸಾಧಿಸಿವೆ.







# ಗೃಹಲಕ್ಷ್ಮಿ



# ಹರಪನಹಳ್ಳಿ ಬೀಮವ್ವ

ವಿದ್ಯಾವಂತರಾದ ಪ್ರತಿಭಾನ್ವಿತರು ಅನೇಕ ಕೃತಿಗಳನ್ನು ರಚಿಸಿ ಜನಪ್ರಿಯರಾಗುವುದು ಅಷ್ಟೊಂದು ಆಶ್ಚರ್ಯಕರ ಸಂಗತಿಯಲ್ಲ. ಆದರೆ ಓದು–ಬರಹ ಬಾರದ ನಿರಕ್ಷರಕುಕ್ಷಿಯೊಬ್ಬಳು ತಿಳಿಯದ ಸರಸ ಶೈಲಿಯಲ್ಲಿ ಮಧುರವಾಗಿ ಜನ–ಮನವನ್ನು ಮುಟ್ಟುವ ಕೃತಿಗಳನ್ನು ರಚಿಸುವುದು ಆಶ್ಚರ್ಯಕರ. ಶ್ರೀಹರಿಯ ಅನುಗ್ರಹ ವಿಶೇಷದಿಂದ ಇಂತಹ ಆಶ್ಚರ್ಯಕರ ಕಾರ್ಯವನ್ನು ಮಾಡಿ ಕನ್ನಡಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದವಳು ಹರಪನಹಳ್ಳಿ ಭೀಮವ್ವ !

ಈ ಕಡೆ ಭೀಮವ್ವನ ಹೆಸರು ಅಷ್ಟಾಗಿ ಕೇಳಿಬರುವುದಿಲ್ಲ. ಆದರೆ ಬಳ್ಳಾರಿ, ರಾಯದುರ್ಗ, ಧಾರವಾಡಗಳ ಕಡೆ ಅವಳು ಮನೆ–ಮನೆಯ ಮಾತಾಗಿದ್ದಾಳೆ. ಭೀಮವ್ವ ರಚಿಸಿರುವ ಭಕ್ತಿರಸಪೂರ್ಣವಾದ ಹಲವಾರು ಹಾಡುಗಳು ಇಂದಿಗೂ ಆ ಕಡೆಯ ಹೆಂಗಸರ ನಾಲಿಗೆಗಳ ಮೇಲೆ ಉದಯರಾಗವಾಗಿ ನಲಿಯುತ್ತಿವೆ. ಕೇಳಿದಾಕ್ಷಣ ಮತ್ತೊಮ್ಮೆ ಕೇಳಬೇಕೆನಿಸುವಷ್ಟು ಆನಂದವಾಗುತ್ತದೆ.

ಹರಪನಹಳ್ಳಿ ಭೀಮವ್ವ ಸಾಮಾನ್ಯವಾದ ಹಳ್ಳಿಯ ಹೆಂಗಸು. ಹೆಸರೇ ಹೇಳುವಂತೆ ಅವಳು ಹರಪನಹಳ್ಳಿಯವಳು. ಅವಳ ತವರು ಮನೆ ಮತ್ತು ಅತ್ತೆಯಮನೆ ಎರಡೂ ಹರಪನಹಳ್ಳಿಯಲ್ಲಿಯೇ ಇದ್ದದ್ದು. ವೈಷ್ಣವ ಸಂಪ್ರದಾಯದ ಕುಟುಂಬವೊಂದರಲ್ಲಿ ಕ್ರಿ. ಶ. ೧೮೨೨ ನೇ ಇಸವಿಯಲ್ಲಿ ಜನಿಸಿದ ಅವಳಿಗೆ ಓದಲು ಬರುತ್ತಿರಲಿಲ್ಲ; ಬರೆಯುವುದಕ್ಕಂತೂ ಮೊದಲೇ ಬರುತ್ತಿರಲಿಲ್ಲ. ಜೊತೆಗೆ ಆಗಿನ ಕಾಲದ ಪದ್ಧತಿಯಂತೆ ಚಿಕ್ಕ ವಯಸ್ಸಿನಲ್ಲಿಯೇ ಅವಳ ಮದುವೆಯಾಯಿತು.

ಭೀಮವ್ವ ದೀರ್ಘ ಕಾಲ ದಾಂಪತ್ಯ ಜೀವನ ನಡೆಸಲಿಲ್ಲ. ವಿಧಿಯ ವೈಚಿತ್ರದಿಂದ ಅವಳಿಗೆ ತನ್ನ ಮುವತ್ತೈದನೇ ವಯಸ್ಸಿಗೇ ವೈಧವ್ಯ ಪ್ರಾಪ್ತವಾಯಿತು. ಜೀವನದ ಪ್ರೌಢಾವಸ್ಥೆಯಲ್ಲಿ ಒದಗಿದ ಈ ಆಘಾತದಿಂದ ಅವಳ ಬಾಳಿನ ದಿಕ್ಕೇ ಬದಲಾಯಿತು. ಪ್ರಾಪಂಚಿಕ ವಿಷಯಗಳ ಕಡೆಗೆ ವೈರಾಗ್ಯ ಭಾವನೆ ಬಲವಾಯಿತು. ಎಲ್ಲವೂ ದೇವರು ನಡೆಸಿದಂತೆಯೇ ನಡೆಯುವುದೆಂದು ಮನಸ್ಸು ನಿರ್ಲಿಪ್ತವಾಯಿತು. ತನ್ನ ಮುಂದಿನ ಬದುಕನ್ನು ಒಂದು ತಪಸ್ಸಿನಂತೆ ತಿಳಿದು ಕೃಷ್ಣಾರ್ಪಣ ಬುದ್ಧಿಯಿಂದ ಬಾಳಬೇಕೆಂದು ಭೀಮವ್ವ ಸಂಕಲ್ಪಿಸಿದಳು.



ದೇವರ ವಿಷಯದ ಕಡೆ ಮನಸ್ಸು ಸದಾ ಎಳೆಯುತ್ತಿದ್ದ ಹಾಗೆ ಭೀಮವ್ವನಲ್ಲಿ ಭಕ್ತಿಭಾವ ಆಳವಾಗಿ ಬೇರೂರಿತು. ಚಿಂತನಶಕ್ತಿ ಅಧಿಕವಾಯಿತು. ದೇವರ ಮುಂದೆ ಎದೆಯ ತುಮುಲವನ್ನು ತೋಡಿಕೊಂಡು ನಡೆಯುವ ನುಡಿಗಳೆಲ್ಲಾ ಹಾಡಾಗಲು ಪ್ರಾರಂಭವಾಯಿತು. ಅರ್ಥಭರಿತವಾದ ಪ್ರಾಸಬದ್ಧವಾದ ಸಾಲುಗಳು ಸುಂದರವಾದ ಚೌಕಟ್ಟಿನಲ್ಲಿ ಮೈದುಂಬಿ ನಿಲ್ಲುತ್ತಿದ್ದವು.

## ಭೀಮೇಶ ಕೃಷ್ಣ

ಭೀಮವ್ವ ಹೇಳುವ ಹಾಡುಗಳು ತುಂಬಾ ಸರಳವಾಗಿದ್ದು, ಭಕ್ತಿರಸವನ್ನು ಉಕ್ಕೇರಿಸಿ ಪುಲಕಿತಗೊಳಿಸುತ್ತಿದ್ದುದರಿಂದ ಹತ್ತಿರವಿದ್ದ ಜನಗಳು ಅವುಗಳನ್ನು ಬರೆದಿಟ್ಟುಕೊಳ್ಳುತ್ತಿದ್ದರು. ಭೀಮವ್ವ ತನ್ನೆಲ್ಲಾ ಕೃತಿಗಳಿಗೂ "ಭೀಮೇಶ ಕೃಷ್ಣ" ಎಂಬ ಅಂಕಿತ ಹಾಕಿದ್ದಾಳೆ. ಇದಕ್ಕೆ ಕಾರಣವೂ ಇಲ್ಲದಿಲ್ಲ. ಅವಳ ತವರು ಮನೆಯ ಹೆಸರು ಭೀಮವ್ವ, ಅತ್ತೆಮನೆಯ ಹೆಸರು ಕೃಷ್ಣಾಬಾಯಿ. ಈ ಎರಡು ಹೆಸರುಗಳನ್ನೂ ಸೇರಿಸಿ ಭೀಮವ್ವ "ಭೀಮೇಶ ಕೃಷ್ಣ" ಎಂಬ ಮುದ್ರಿಕೆಯಿಂದ ಸುಭದ್ರಾ ಕಲ್ಯಾಣ, ರತಿ ಕಲ್ಯಾಣ, ಸುಧಾಮನ ಹಾಡು, ನಳಚರಿತ್ರೆ, ಕೃಷ್ಣ ದಾನ ನೃತ್ಯ ಮುಂತಾಗಿ ಅನೇಕ ದೀರ್ಘವಾದ ಕೃತಿಗಳನ್ನು ರಚಿಸಿದ್ದಾಳೆ.

**ಜಯಸಿಂಹ**

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

ಭೀಮುವ್ವನ ಕೃತಿಗಳಲ್ಲಿ ಈ ದೀರ್ಘವಾದ ರಚನೆಗಳು ಅವಳ ಸಹಜ ಪ್ರತಿಭೆಗೆ ಕೈಗನ್ನಡಿಯಾಗಿವೆ. ಭಕ್ತಿಯ ರಭಸದಲ್ಲಿ ರಚಿತವಾಗಿರುವ ಈ ಕೃತಿಗಳು ಒಂದೊಂದೂ ಒಂದು ಪುಸ್ತಕವಾಗುವಷ್ಟು ದೊಡ್ಡದಾಗಿವೆ. ಭಾವನೆಗಳನ್ನು ಸರಳವಾದ ಭಾಷೆಯ ಮೂಲಕ ಅಭಿವ್ಯಕ್ತಗೊಳಿಸುವ ಚಮತ್ಕಾರವನ್ನು ಭೀಮವ್ವ ಮೈಗೂಡಿಸಿಕೊಂಡಿದ್ದಾಳೆ. "ಭೀಮೇಶ ಕೃಷ್ಣ"ನಲ್ಲಿ ಅವಳಿಗಿರುವ ಆಳವಾದ ಸದೃಢ ಭಕ್ತಿ ಎಂಥಹವರನ್ನೂ ಮೂಕ ವಿಸ್ಮಿತರನ್ನಾಗಿ ಮಾಡುತ್ತದೆ.

ದೀರ್ಘವಾದ ರಚನೆಗಳಲ್ಲದೆ ಭೀಮುವ್ವ ಕೀರ್ತನೆಗಳನ್ನು, ಒಗಟುಗಳನ್ನು, ಆರತಿ ಹಾಡುಗಳನ್ನು ಸಹ ರಚಿಸಿದ್ದಾಳೆ. ಅವಳ ಶುಕ್ರವಾರದ ಹಾಡು, ಶನಿವಾರದ ಹಾಡು, ಮಂಗಳಗೌರಿ ಹಾಡು, ಸೀರೆ ಹಾಡುಗಳಂತೂ ತುಂಬಾ ಜನಪ್ರಿಯವಾಗಿವೆ. ಮುತ್ತೈದೆಯರು ಶುಭಸಂದರ್ಭಗಳಲ್ಲಿ ಅವುಗಳನ್ನು ಸುಶ್ರಾವ್ಯವಾಗಿ ಹೇಳುವುದನ್ನು ನಾವು ಈಗಲೂ ಕೇಳಬಹುದು.

ವೈಷ್ಣವ ಸಂಪ್ರದಾಯದ ಯತಿಗಳ ಬಗ್ಗೆ ಮತ್ತು ಹರಿದಾಸ ಶ್ರೇಷ್ಠರ ಬಗ್ಗೆ ಭೀಮವ್ವ ಸುಂದರವಾದ ಕೀರ್ತನೆಗಳನ್ನು ರಚಿಸಿದ್ದಾಳೆ. ಕೈಲಾಸಪತಿಯಾದ ಈಶ್ವರ, ಗಣಪತಿ, ಹನುಮಂತ, ಲಕ್ಷ್ಮಿ ಮತ್ತು ಶ್ರೀಹರಿಯನ್ನು ಕುರಿತು ಅವಳು ಹಾಡಿರುವ ಕೀರ್ತನೆಗಳು ಮನಸೆಳೆಯುವ ಶೈಲಿಯಲ್ಲಿವೆ.

"ಅಪ್ಪ ವೆಂಕೋಬನ ನೇತ್ರದಲಿ
ನೋಡಿ ಪವಿತ್ರಳಾದೆನು ಇಂದಿಗೇ !
ತಪ್ಪುಗಳೆಲ್ಲ ನಿನಗರ್ಪಿಸುವೆ ನಾನೀಗ
ಒಪ್ಪಿಸಿಕೋ ಬೇಕೋ ತಿಮ್ಮಪ್ಪ
ಕರುಣಾನಿಧೀ ||

ಎಂದು ತಿರುಪತಿ ವೆಂಕಟೇಶ್ವರನನ್ನು ಕುರಿತು ಹೇಳಿರುವ ಸ್ತೋತ್ರ ಪದ ತೈಲಧಾರೆಯಂತೆ ಹೊರ ಹೊಮ್ಮುವ ಅವಳ ನಿರ್ಮಲ ಭಕ್ತಿಯನ್ನು ತೋರಿಸುತ್ತದೆ. ಶ್ರೀಕೃಷ್ಣನ ಲೀಲೆಗಳನ್ನು ವರ್ಣಿಸುವುದೆಂದರೆ ಭೀಮವ್ವನಿಗೆ ಎಲ್ಲಿಲ್ಲದ ಉತ್ಸಾಹ. ಅವನ ಬಾಲ ಲೀಲೆಗಳನ್ನು, ಗೋಪ-ಗೋಪಿಯರ ಸಂಗಡ ಅವನು ನಡೆಸಿದ ತುಂಟಾಟಗಳನ್ನು ತುಂಬಾ ರಮ್ಯವಾಗಿ ಚಿತ್ರಿಸಿದ್ದಾಳೆ.

## ಸ್ತುತಿ ಮಣಿ ಮಾಲಿಕೆ

ಭೀಮವ್ವ ರಚಿಸಿರುವ ಕೃತಿಗಳಲ್ಲಿ "ಸ್ತುತಿ ಮಣಿ ಮಾಲಿಕೆ" ವಿಶಿಷ್ಟವಾದುದು. ಸುವ್ವಾಲಿ ಧಾಟಿಯಲ್ಲಿರುವ ಇದು ಭೀಮವ್ವನ ಕಾವ್ಯ ಪ್ರತಿಭೆಗೆ ಸಾಕ್ಷಿಯಾಗಿದೆ. ಅವಳ ಕಳವಳ, ಕಾತುರ, ಭಕ್ತಿ, ನಂಬಿಕೆಗಳು ಇಲ್ಲಿ ಮನೋಹರವಾಗಿ ಮಡುಗಟ್ಟಿವೆ. ಒಮ್ಮೆ ವಿಶ್ವಾಸ, ಮತ್ತೊಮ್ಮೆ ಕಳವಳ. ಒಮ್ಮೆ ಬೇಸರ ಮತ್ತೊಮ್ಮೆ ಪರಿತಾಪ. ಒಮ್ಮೆ ಭಗವಂತನಲ್ಲಿ ಮುನಿಸು ಮತ್ತೊಮ್ಮೆ ಸದೃಢವಾದ ನಂಬಿಕೆ. ಈ ಎಲ್ಲಾ ಭಾವನೆಗಳೂ ಇಲ್ಲಿ ಸಂಗಮಿಸಿ ಓದುಗರನ್ನು ಬೇರೊಂದು ಲೋಕಕ್ಕೆ ಕರೆದೊಯ್ಯುತ್ತವೆ.

"ಶೇಷಗಿರಿವಾಸ ಆಕಾಶನಳಿಯನೆ ವೆಂಕ
ಟೇಶ ನಮ್ಮ ಮನೆ ದೈವ ! ವೆಂಕಟೇಶ
ನಮ್ಮ ಮನೆ ದೈವ ಸಲಹೆನ್ನ
ಪದ್ಮಾವತೀಶ ಪರಮಾತ್ಮಾ ||"

ಎಂಬುದರಲ್ಲಿ ಅವಳಿಗೆ ಮನೆ ದೈವವಾದ ವೆಂಕಟೇಶನಲ್ಲಿರುವ ಭಕ್ತಿಯನ್ನು ತೋರಿಸಿದರೆ–

"ಮುಕ್ತಿದಾಯಕ ನಿನ್ನ ಭಕ್ತರೇಸು
ಮಂದಿ
ಹೆತ್ತಾಯಿ ಸುತರೇನವರೆಲ್ಲಾ !
ಹೆತ್ತಾಯಿ
ಸುತರೇನವರು ನಾ ಹುಟ್ಟಿದೆನೆ
ಮತ್ತೆ ಮಲತಾಯಿ ಉದುರದಿ ||"

ಎಂಬ ನುಡಿಯಲ್ಲಿ ಭಗವಂತ ಮಲತಾಯಿ ಧೋರಣೆಯನ್ನು ತೋರುವನೆಂಬ ಮುನಿಸಿದೆ.

ಹೊತ್ತು ಹೋಗುತಲಿದೆ ಮೃತ್ಯು
ಕೂಗುತಲಿದೆ
ವ್ಯರ್ಥವಾಗುವುದೊ ಈ ಜನ್ಮ! ವ್ಯರ್ಥ
ವಾಗುವುದೊ ಈ ಜನ್ಮ ನಿನ್ನ ನಾಮ
ದೆತ್ತರವು ನನಗೆ ನಿಲುಕಾದೊ"

ಎಂಬ ಕಳವಳವೂ ಇದೆ. ಹೀಗೆ ಸದೃಢ ಭಕ್ತಿಯ ಚೌಕಟ್ಟಿನಲ್ಲಿ ವಿವಿಧ ಭಾವನೆಗಳ ಬುಗ್ಗೆಯಿರುವ ಈ "ಸ್ತುತಿ ಮಣಿ ಮಾಲಿಕೆ" ಭೀಮುವ್ವನ ಅಪೂರ್ವ ರಚನೆ.

ಭೀಮುವ್ವ ಭಾರತದ ಬಹುತೇಕ ಎಲ್ಲಾ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದಳು. ಆಯಾ ತೀರ್ಥ ಕ್ಷೇತ್ರಗಳನ್ನು ಕುರಿತು ಅವಳು ಮಾಡಿರುವ ಕೃತಿಗಳೇ ಇದಕ್ಕೆ ನಿದರ್ಶನ. ತನ್ನ ೮೧ ನೇ ವಯಸ್ಸಿನಲ್ಲಿ – ಅಂದರೆ ೧೯೦೩ ರಲ್ಲಿ ಭೀಮುವ್ವ ದೇಹ ಬಿಟ್ಟಳೆಂಬ ಹೇಳಿಕೆಯಿದೆ. ಅಂತ್ಯಕಾಲದಲ್ಲಿ ಅವಳು "ಭೀಮೇಶ ಕೃಷ್ಣನ" ಸ್ಮರಣೆ ಮಾಡುತ್ತಿದ್ದುದನ್ನು ಭಕ್ತರು ನೆನೆಸಿಕೊಳ್ಳುತ್ತಾರೆ.

ಓದು, ಬರಹ ಬಾರದ ಸಾಮಾನ್ಯ ಹಳ್ಳಿಯ ಹೆಂಗಸಾದರೂ ಹರಪನಹಳ್ಳಿ ಭೀಮುವ್ವ, ಭೀಮೇಶ ಕೃಷ್ಣನ ಅನುಗ್ರಹದಿಂದ ಕನ್ನಡ ಸಾಹಿತ್ಯಕ್ಕೆ ಕೊಟ್ಟ ಅಮೂಲ್ಯವಾದ ಕೊಡುಗೆ ಎಂಥಹವರಿಗೂ ಆಶ್ಚರ್ಯ ಹುಟ್ಟಿಸುವಂಥದ್ದು. ವಿಧಿಯ ಶಾಪಕ್ಕೆ ಹೆದರದೆ, ವೈಧವ್ಯವನ್ನು ತಪಸ್ಸೆಂದು ತಿಳಿದು ಬದುಕನ್ನೇ ಭಕ್ತಿಯ ಬೆಳಕಾಗಿ ಮಾಡಿಕೊಂಡ ಅವಳ ಜೀವನ ಸ್ಫೂರ್ತಿದಾಯಕವಾದುದು.

ಕನ್ನಡನಾಡಿನ ಹೆಮ್ಮೆಯ ಈ ಕವಯಿತ್ರಿ ರಚಿಸಿರುವ ಕೃತಿಗಳನ್ನು ಸಂಗ್ರಹಿಸುವುದು; ಪ್ರಕಟಿಸಿ ಪ್ರಯೋಜನ ಪಡೆಯುವುದು ಕನ್ನಡಿಗರ ಕರ್ತವ್ಯವಾಗಿದೆ.



(16ನೇ ಪುಟದಿಂದ)

ನಾನು ಕಾಡಿಗೆ ಹೋಗುವುದು, ಭರತನಿಗೆ ರಾಜ್ಯವನ್ನು ವಹಿಸಿಕೊಡುವುದು. ನನ್ನೊಂದಿಗೆ ಪ್ರಜೆಗಳು ಹಿಂಬಾಲಿಸಿ ಬರಲು ಆಕೆ ಅನುಮತಿ ನೀಡಿಲ್ಲ. ನನ್ನೊಂದಿಗೆ ಅವರು ಬರಲು ಒಪ್ಪಿದ್ದರೆ ನಾನು ರಾಜದ್ರೋಹಿಯಾಗುತ್ತಿದ್ದೆ'

'ಹೇಗೆ?'

'ಎಂದು ನಾನು ರಾಜ್ಯಾಧಿಕಾರವನ್ನು ಭರತನಿಗೆ ಬಿಟ್ಟುಕೊಟ್ಟೆನೋ ಅಂದೇ ಪ್ರಜೆಗಳೂ ಅವನ ಅಧಿಕಾರಕ್ಕೆ, ಆಳ್ವಿಕೆಗೆ ಒಳಪಟ್ಟರು. ಅವನ ಪ್ರಜೆಗಳು ನನ್ನೊಂದಿಗೆ ಬರಲು ಒಪ್ಪಿದರೆ, ಅವನ ಪ್ರಜೆಗಳನ್ನು ನಾನು ಅಪಹರಿಸಿದಂತೆ ಆಗುತ್ತಿರಲಿಲ್ಲವೆ? ಇದು ರಾಜದ್ರೋಹವಾಗುತ್ತಿತ್ತು. ಅಲ್ಲದೆ ಇದರಿಂದ ಮತ್ತೂ ಒಂದು ಸಮಸ್ಯೆ ಉದ್ಭವಿಸುತ್ತಿತ್ತು.'

'ಏನದು?'

'ಇಂದು ಈ ಜನರು ನನ್ನೊಂದಿಗೆ ಬರಲು ಒಪ್ಪಿದಲ್ಲಿ, ಈ ಸುದ್ದಿ ಅಯೋಧ್ಯೆಯಲ್ಲಿನ ಇತರ ಪ್ರಜೆಗಳಿಗೆ ತಿಳಿದು ನಂತರ ಅವರೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಅಯೋಧ್ಯೆಯನ್ನು ಬಿಡುತ್ತಿದ್ದರು. ಇದರ ಪರಿಣಾಮವಾಗಿ ಅಯೋಧ್ಯೆಯಲ್ಲಿ ಪ್ರಜೆಗಳೇ ಇರುತ್ತಿರಲಿಲ್ಲ. ಪ್ರಜೆಗಳಿಲ್ಲದ ನಗರ ಎಂತಹ ನಗರವಾದೀತು? ನಿರ್ಜನ ನಗರಗಳನ್ನು ಹೊಂದಿರುವ ದೇಶ ಎಂತಹ ದೇಶವಾದೀತು? ಹೀಗಾದಲ್ಲಿ ಕೊಟ್ಟ ಮಾತನ್ನು ನಾನು ವಂಚಿಸಿದಂತಾಗುತ್ತಿತ್ತು.'

'ಕೊಟ್ಟ ಮಾತಿನಿಂದ ವಂಚನೆಯೆ?'

'ಹೌದು! ತಂದೆಯವರಿಗೆ ಕೊಟ್ಟಿರುವ ಮಾತು, ಕಾಡಿನಲ್ಲಿ ತಾಪಸಿಯಂತೆ ಇರುತ್ತೇನೆಂಬುದು. ಹಿಂಬಾಲಿಸಿ ಬಂದ ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಳ್ಳುವವನು ರಾಜನಾಗಬೇಕಾಗುತ್ತದೆಯೇ ವಿನಹ ತಾಪಸಿಯಾಗಲ್ಲ. ಇವರುಗಳ ಜವಾಬ್ದಾರಿಯನ್ನು ಹೊತ್ತವನು ತಾಪಸಿಯ ಕರ್ತವ್ಯಗಳನ್ನು ನಡೆಸುವುದೆಂತು! ಹಾಗಾಗಿದ್ದಲ್ಲಿ ಕರ್ತವ್ಯಚ್ಯುತಿಯ ಆಪಾದನೆ ಉಂಟಾಗುತ್ತಿತ್ತು. ಈ ಸನ್ನಿವೇಶದಲ್ಲಿ ಕರ್ತವ್ಯ ಪ್ರಜ್ಞೆಯ ನಿರ್ವಹಣೆಯೂ ಇತ್ತು.'

'ಕರ್ತವ್ಯ ಪ್ರಜ್ಞೆಯೆ? ಎಂತಹುದದು?'

'ಪ್ರಜೆಗಳನ್ನು ಸರಿಯಾದ ದಾರಿಯಲ್ಲಿ ಕರೆದು ಕೊಂಡು ಹೋಗುವುದು ರಾಜನ, ರಾಜನಾಗಿದ್ದವನ ಕರ್ತವ್ಯ. ಪ್ರಜೆಗಳು ಮೋಹದಾವೇಶದಲ್ಲಿ ನನ್ನನ್ನು ಹಿಂಬಾಲಿಸಿದರೆ, ಯಾವುದಾದರೊಂದು ರೀತಿಯಲ್ಲಿ ಅವರನ್ನು ಸರಿಯಾದ ದಾರಿಯಲ್ಲಿ ಹೋಗುವಂತೆ ಮಾಡುವುದು ಕ್ಷತ್ರಿಯನಾದ ನನ್ನ ಕರ್ತವ್ಯ. ತಮಗಾಗಿ ನಿರ್ಮಿತವಾಗಿರುವ ನಗರ ನಾಶವಾದರೆ ಮಾತ್ರ ಅವರು ಅಲ್ಲಿಂದ ವಲಸೆ ಹೋಗಬೇಕೇ ವಿನಹ, ರಾಜನು ಬದಲಾವಣೆ ಆದ ಹಾಗೆಲ್ಲ, ಪ್ರಜೆಗಳೂ ಬದಲಾಗಬಾರದು. ತಮ್ಮ ನಗರಗಳಲ್ಲಿದ್ದು ತಮಗಾಗಿ ದೈವದತ್ತವಾಗಿ ನೀಡಲ್ಪಟ್ಟಿರುವ ಉದ್ಯೋಗಗಳಲ್ಲಿ ನಿರತರಾಗಿರಬೇಕಾದುದು ಅವರ (ಪ್ರಜಾ) ಕರ್ತವ್ಯ. ಅವರು ನನ್ನನ್ನು ಹಿಂಬಾಲಿಸಿದಾಗ, ತಮ್ಮ ಕರ್ತವ್ಯವನ್ನು ಮರೆತು ಕರ್ತವ್ಯ ಚ್ಯುತರಾಗುತ್ತಿದ್ದರು. ಅವರುಗಳ ಹಿತದೃಷ್ಟಿಯಿಂದ, ಅವರ ಕರ್ತವ್ಯ ಪ್ರಜ್ಞೆಯನ್ನು ಅವರುಗಳಿಗೆ ಮರಳಿ ಕೊಡಿಸುವುದಕ್ಕಾಗಿ, ನಾನು ಮಾಡಿದದು ಈ ಒಂದು ಸಣ್ಣ ಉಪಾಯ. ಈ ಉಪಾಯವು ರಾಜಧರ್ಮ ನಿರ್ವಹಣೆಯ ಒಂದು ಅಂಗವೇ ಹೊರತು ವಂಚನೆಯಲ್ಲ. ಮೇಲ್ನೋಟಕ್ಕೆ ಇದು ವಂಚನೆಯೆಂದು ಕಾಣಬಹುದು. ಆದರೆ ಈ ಸಮಸ್ಯೆಯ ಆಳ ತಿಳಿದು ವಿಶ್ಲೇಷಿಸಿದಲ್ಲಿ, ಧರ್ಮಸೂಕ್ಷ್ಮದಿಂದ ಕೂಡಿದ ರಾಜಕೀಯ ತತ್ವ ಹಾಗೂ ರಾಜಧರ್ಮವೊಂದು ಇದರಲ್ಲಿ ಅಡಗಿರುವುದನ್ನು ಕಾಣಬಹುದು ಈ ಉಪಾಯ ಒಂದು ರಾಜತಂತ್ರ. ರಾಜನ ಆಳ್ವಿಕೆಯ ದಂಡಗಳಲ್ಲಿ ರಾಜತಂತ್ರವೂ ಒಂದು.........ರಾಜನಾದವನು ತನಗಾಗಿ ಬರುವ ಕಷ್ಟಗಳನ್ನು ತಾನೊಬ್ಬನೇ ಸಹಿಸಿ, ನಿರ್ವಹಿಸಬೇಕು. ಅವನ್ನು ಪ್ರಜೆಗಳ ಹೆಗಲ ಮೇಲೆ ಹೇರಬಾರದು. ರಾಜನು ತನ್ನ ದುಃಖವನ್ನು ಪ್ರಜೆಗಳೊಂದಿಗೆ ಹಂಚಿಕೊಳ್ಳಬಾರದು. ಅವರಿಗೆ ದುಃಖವನ್ನೂ ಕೊಡಬಾರದು. ತನ್ನ ದುಃಖದಲ್ಲಿ ಅವರನ್ನು ಸೇರಿಸಲೂ ಬಾರದು. ಹಾಗೆ ಆದಂದು ಧರ್ಮಚ್ಯುತಿ ಆಗಿ ಅಧರ್ಮ ಅನಾಚಾರಗಳು ತಾಂಡವವಾಡುತ್ತವೆ.'

ಈ ಅಪರೋಕ್ಷ ತತ್ವೋಪದೇಶದಿಂದ ತಾವುಗಳು ಪುನೀತರಾದೆವು ಎಂದುಕೊಂಡ ಸುಮಂತ್ರ ಲಕ್ಷ್ಮಣರು ಪುಲಕಿತಗೊಂಡರು. ಸುಮಂತ್ರನಂತೂ ತೃಪ್ತಿಗೊಂಡು ಶಾಂತಚಿತ್ತನಾದನು. ಸೀತಾದೇವಿಯು ಶ್ರೀರಾಮನ ಪಾದಾರವಿಂದಗಳನ್ನು ವೀಕ್ಷಿಸುತ್ತಿದ್ದಳು.

★ ★

# ಹುತಾಶನೀ ಪೂರ್ಣಿಮಾ

— ಶ್ರೀ ಕೃಷ್ಣಮೂರ್ತಿ ಅರ್ಚಕ ಎಂ. ಏ

ಎಲ್ಲ ಜನಾಂಗದವರು ಪ್ರಾಚೀನಕಾಲದಿಂದ ಫಾಲ್ಗುಣಮಾಸದ ಶುಕ್ಲಪಕ್ಷಪೂರ್ಣಿಮೆಯ ದಿವಸ ಸಾಮಾನ್ಯವಾಗಿ ಆಚರಿಸುತ್ತಿರುವ ಹಬ್ಬಕ್ಕೆ ವಸಂತ ಪೂರ್ಣಿಮಾ, ಹುತಾಶನೀ ಪೂರ್ಣಿಮಾ, ಹೋಳಿಹುಣ್ಣಿಮೆ ಇತ್ಯಾದಿಯಾಗಿ ಕರೆಯುವ ಪ್ರಸಿದ್ಧಿ. ಋತುರಾಜನಾದ ವಸಂತಋತುವಿಗೆ ಸಂಭ್ರಮದಿಂದ ಈ ಹುಣ್ಣಿಮೆಯು ಎಲ್ಲೆಲ್ಲಿಯೂ ನಗೆಮಲ್ಲಿಗೆಯೆಂಬ ಬೆಳದಿಂಗಳನ್ನು ಪ್ರಸರಿಸುವ ಪೂರ್ಣಚಂದ್ರನಿಂದ ಒಡಗೂಡಿ ಸ್ವಾಗತವನ್ನು ಬಯಸುವದರಿಂದ ಈ ಹಬ್ಬಕ್ಕೆ ವಸಂತ ಪೂರ್ಣಿಮಾ ಎಂದು ಕರೆಯುವದು ಔಚಿತ್ಯಪೂರ್ಣವಾಗಿದೆ. ಈ ಹಬ್ಬವು ಅಗ್ನಿಗೆ ಸಂಬಂಧಪಟ್ಟಿರುವುದರಿಂದ ಅಥವಾ ಕಾಮನನ್ನು ಈ ದಿವಸ ಶಿವನು ತನ್ನ ಮೂರನೇ ನೇತ್ರದಿಂದ ಹೊರಟ ಅಗ್ನಿಯಿಂದ ದಹಿಸಿರುವುದರಿಂದ ಈ ಹಬ್ಬಕ್ಕೆ ಹುತಾಶನೀ ಪೂರ್ಣಿಮಾ ಎಂದು ಕರೆಯುವುದು ರೂಢಿಯಲ್ಲಿ ಬಂದಿತೆನ್ನಬಹುದು, (ಹೇಮಾದ್ರಿಯಿಂದ ರಚಿತವಾದ 'ಕಾಲನಿರ್ಣಯ' ಎಂಬ ಗ್ರಂಥದಲ್ಲಿ ಉದಾಹರಿಸಲ್ಪಟ್ಟ 'ಬೃಹದ್ಯಮ'ದಲ್ಲಿ ಈ ಪೂರ್ಣಿಮೆಗೆ 'ಹುತಾಶನೀ ಪೂರ್ಣಿಮಾ' ಎಂದು ಕರೆದಿದ್ದಾರೆ–(ಹಿಸ್ಟರಿ ಆಫ್ ಧರ್ಮಶಾಸ್ತ್ರ ಐದನೆಯ ಸಂಪುಟ, ಮೊದಲನೇ ಭಾ,–ಪಿ.ವಿ. ಕಾಣೆ). ಇನ್ನು ಈ ಹುಣ್ಣಿಮೆಗೆ 'ಹೋಳಿಹುಣ್ಣಿಮೆ' ಎಂದು ಕರೆಯುವ ರೂಢಿ ಹೇಗೆ ಬಂದಿತು ಎಂಬುದರ ಬಗ್ಗೆ ಗಮನಿಸೋಣ:

ಭವಿಷ್ಯೋತ್ತರ ಪುರಾಣದಲ್ಲಿ (132–1–52) ಪಾಂಡುನಂದನಾದ ಅರ್ಜುನನು ಶ್ರೀಕೃಷ್ಣಪರಮಾತ್ಮನನ್ನು ಪ್ರಶ್ನಿಸುತ್ತಾನೆ– 'ಸರ್ವಜ್ಞಮೂರ್ತಿಯಾದ ಭಗವಂತನೇ, ಫಾಲ್ಗುಣಪೂರ್ಣಿಮೆಯ ದಿವಸ ಪ್ರತಿಯೊಂದು ಗ್ರಾಮ–ನಗರಗಳಲ್ಲಿ ಆಚರಿಸುವ ಹಬ್ಬವು ಯಾವುದು? ಪ್ರತಿಯೊಂದು ಮನೆಯಲ್ಲಿ ಬಾಲಕರು ಒಟ್ಟುಗೂಡಿ ಗದ್ದಲಮಾಡುತ್ತ ಹೋಲಿಕಾದಹನವನ್ನು ಏಕೆ ಮಾಡುವರು? ಯಾವ ದೇವತೆಯನ್ನು ಅಲ್ಲಿ ಪೂಜಿಸುತ್ತಾರೆ' ಇತ್ಯಾದಿಯಾಗಿ ಕೇಳಲು ಶ್ರೀಕೃಷ್ಣನು ಉತ್ತರರೂಪವಾಗಿ ಒಂದು ಆಖ್ಯಾನವನ್ನು ಹೇಳುತ್ತಾನೆ:–

ಸತ್ಯಯುಗ (ಕೃತಯುಗ)ದಲ್ಲಿ ರಘುರಾಜನ ಸಾಮ್ರಾಜ್ಯದಲ್ಲಿ ಢುಂಢಾ ಎಂಬ ರಾಕ್ಷಸಿಯು ಶಿವನ ವರಪ್ರಭಾವದ ಮೂಲಕ ಎಳೆಯ ಮಕ್ಕಳಿಗೆ ಮಾರಕ ಪ್ರಾಯಳಾಗಿದ್ದಳು, ರಾಜ್ಯದ ಎಲ್ಲ ಪ್ರಜೆಗಳು ರಘುರಾಜನಲ್ಲಿ ಬಂದು ರಾಕ್ಷಸಿಯಿಂದ ಉಂಟಾದ ಕಂಟಕಕ್ಕೆ ಪರಿಹಾರವನ್ನು ಕೇಳಿದರು. ರಾಜನು ತಮ್ಮ ಪುರೋಹಿತರನ್ನು ಈ ವಿಷಯದ ಬಗ್ಗೆ ಕೇಳಿದಾಗ, ಅವರು ಹೀಗೆ ಹೇಳುವರು: "ಫಾಲ್ಗುಣಪೂರ್ಣಿಮೆಯು ದಿವಸ ಕುಳ್ಳುಕಟ್ಟಿಗೆಗಳನ್ನು ಸಂಚಯಿಸಿ ವಿಧಿವತ್ತಾಗಿ ಅಲ್ಲಿ ಅಗ್ನಿಯನ್ನು ಸ್ಥಾಪಿಸಬೇಕು.

> ಸಂಚಯಂ ಶುಷ್ಕಕಾಷ್ಠಾನಾಂ ಉಪಲಾನಾಂ
> ಚ ಕಾರಯೇತ್ ।
> ತತ್ರಾಗ್ನಿಂ ವಿಧಿವತ್ ಹುತ್ವಾರಕ್ಷೋಘ್ನೈಃ
> ಮಂತ್ರವಿಸ್ತರೈಃ ॥
> (ಭವಿಷ್ಯೋತ್ತರ ಪುರಾಣ ಮತ್ತು ವ್ರತರಾಜ)

ಈ ರಾಕ್ಷಸಿಯ ಪೀಡಾಪರಿಹಾರಕ್ಕೋಸ್ಕರ ಮುಖವಾದ್ಯ ಮಾಡುತ್ತ, ಲಿಂಗಭಗಾಂಕಿತ ಶಬ್ದಗಳನ್ನು ಉಚ್ಚರಿಸುತ್ತ ಅಗ್ನಿಗೆ ಮೂರು ಪ್ರದಕ್ಷಿಣೆ ಹಾಕಬೇಕು. ಹೀಗೆ ಮಾಡುವ ಹೋಮವಿಶೇಷಕ್ಕೆ 'ಹೋಲಿಕಾ' ಎನ್ನುವರು.

> ಸರ್ವದುಷ್ಟಾಪಹೊ ಹೊಮಃ ಸರ್ವ
> ರೋಗೋಪಶಾಂತಿದಃ ।
> ಕ್ರಿಯತೇಽಸ್ಯಾಂ ದ್ವಿಜೈಃ ಪಾರ್ಥ ತೇನಸಾ
> ಹೋಲಿಕಾ ಸ್ಮೃತಾ ॥
> (ಭವಿಷ್ಯೋತ್ತರ ಪುರಾಣ 131–32)

ಆದ್ದರಿಂದ ಈ ಪೂರ್ಣಿಮೆಗೆ ಹೋಳಿಹುಣ್ಣಿಮೆ ಅಥವಾ ಹೋಲಿಕಾ ಪೂರ್ಣಿಮಾ ಎಂದು ಕರೆಯುವರು. ('ಶುಷ್ಕಗೋಮಯಕೃತೋಽಗ್ನಿ ವಿಶೇಷಃ ಹೋಲಾಕಃ' ಎಂದು ಶಬ್ದಕಲ್ಪದ್ರುಮದ ಐದನೇ ಸಂಪುಟ–೫೫೩ನೇಪುಟದಲ್ಲಿ ಹೇಳಿದೆ.) ಹೀಗೆ ಮಾಡುವದರಿಂದ ರಾಕ್ಷಸಿಯ ಪೀಡೆಯು ಪರಿಹಾರವಾಗುವದರಲ್ಲಿ ಸಂಶಯವೇ ಇಲ್ಲ.

> ಭಯೇನ ತೇನ ಸಾ ರಂಡಾ ಪಲಾಯೇ
> ಲ್ಲಜ್ಜಿತಾ ಸತೀ ।
> ಮರಿಷ್ಯತಿ ಸಂದೇಹೋ ಭಸ್ಮೀಭೂತಾ ತು
> ಪೂತನಾ ॥

ಹೀಗೆ ಪುರೋಹಿತರ ಆದೇಶದಂತೆ ರಾಜನು ನಡೆಯಲು ರಾಕ್ಷಸಿಯ ಉಪಟಳವು ದೂರಾಯಿತು.

ಇನ್ನೊಂದು ಕಥೆ ನಮಗೆ ಇಲ್ಲಿ ತಿಳಿದು ಬರುವದು:—

ಹಿರಣ್ಯಕಶಿಪುವಿಗೆ ಹೋಲಿಕಾ ಎಂಬ ತಂಗಿಯಿದ್ದಳು. ಅಸುರಸ್ವಭಾವದ ಇವಳು ಕಾರಣಾಂತರದಿಂದ 'ಅಗ್ನಿಯಿಂದ ಮೃತ್ಯು' ಎಂಬ ಶಾಪಕ್ಕೆ ಗುರಿಯಾದಳು. ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನ ಅವಿರತವಾದ ಹರಿಭಜನೆಯನ್ನು ಕೇಳಿ ಸಹಿಸಲಾಗದೇ ತನ್ನ ಮಗನನ್ನು ಅಗ್ನಿಯಲ್ಲಿ ಸುಡಲು, ತಂಗಿಯಾದ ಹೋಲಿಕಾಳಿಗೆ ಆಜ್ಞಾಪಿಸಿದನು. ಅವಳು ಪ್ರಹ್ಲಾದಸಹಿತಳಾಗಿ ಅಗ್ನಿಯಲ್ಲಿ ಧುಮುಕಿ ಪ್ರಾಣನೀಗಿದಳು. ಪ್ರಹ್ಲಾದನು ಮಾತ್ರ ಅಗ್ನಿನಾಮಕ ನಾರಾಯಣನ ಅನುಗ್ರಹದಿಂದ ಸುರಕ್ಷಿತವಾಗಿ ಪಾರಾದನು. ಈ ಹೋಲಿಕಾ ದಹನದ ದಿನವಾದ ಹುಣ್ಣಿಮೆಯೇ ಹೋಳಿಹುಣ್ಣಿಮೆ ಅಥವಾ ಹೋಲಿಕಾಪೂರ್ಣಿಮಾ ಎಂದು ರೂಪಗೊಂಡಿರುವದೆಂದು ಪುರಾಣ–ಇತಿಹಾಸಗಳಿಂದ ತಿಳಿದುಬರುವದು.

ಈ ಹಬ್ಬಕ್ಕೆ ಸಂಬಂಧಪಟ್ಟಂತೆ ಇನ್ನೊಂದು ಪ್ರಸಿದ್ಧವಾದ ಕಥೆಯು ಹೀಗಿದೆ:

ಶಿವನ ವರಪ್ರಭಾವದಿಂದ ತಾರಕಾಸುರನು ದೇವತೆಗಳಿಗೆ ಅನೇಕರೀತಿಯಿಂದ ತೊಂದರೆಗಳನ್ನು ತಂದೊಡ್ಡಲು, ಎಲ್ಲ ದೇವತೆಗಳು ವಿಷ್ಣು ಪರಮಾತ್ಮನ ಸನ್ನಿಧಿಗೆ ಬಂದು ಪರಿಹಾರವನ್ನು ಕೇಳಿದರು. ಈ ಹೊತ್ತಿಗೆ ಶಿವನು ಘೋರವಾದ ತಪಸ್ಸನ್ನು ಆಚರಿಸುತ್ತಿದ್ದನು. ಅಲ್ಲದೇ, ಪಾರ್ವತಿಯು 'ಶಿವನನ್ನು ತನ್ನ ಪತಿಯನ್ನಾಗಿ ಹೊಂದಬೇಕು' ಎಂದು ತಪಸ್ಸನ್ನು ಮಾಡುತ್ತಿದ್ದಳು. ಈ ಸುಸಂಧಿಯನ್ನು ದೇವತೆಗಳು ಅವಲೋಕಿಸಿ, ಶಿವನ ತಪಸ್ಸನ್ನು ಭಂಗಮಾಡಲು, ಕಾಮನನ್ನು ಕಳುಹಿಸಿದರು. ಕಾಮನಾದರೂ, ಶಿವ–ಪಾರ್ವತಿಯರಲ್ಲಿ ಜನಿಸುವ ಷಣ್ಮುಖನಿಂದ ತಾರಕಾಸುರನ ವಧೆಯನ್ನು ಮುಂದಾಲೋಚಿಸಿ, ಹೊರಡಲು ಸನ್ನದ್ಧನಾದನು. ಕಾಮನು ಪರಿಮಳವನ್ನು ಸೂಸುವ ಕುಸುಮಾಸ್ತ್ರವನ್ನು ಶಿವನ ಮೇಲೆ ಪ್ರಯೋಗಿಸಲು ಶಿವನ ಮೂರನೇ ನೇತ್ರದಿಂದ ಹುಟ್ಟಿದ ಕೋಪಾಗ್ನಿಯಿಂದ ಸುಟ್ಟು ಭಸ್ಮವಾದನು.

ಈ ಕಥೆಯು ಹೋಳಿಹಬ್ಬದ ಆಚರಣೆಯಲ್ಲಿ ಒಂದು ಮಹತ್ತರವಾದ ಕೊಡುಗೆಯನ್ನು ನೀಡಿತೆಂದು ಹೇಳಬಹುದು.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಹೋಳಿಹಬ್ಬದ ದಿವಸ ಸಕಲ ದುಷ್ಕೃತ್ಯಗಳಿಗೆ ಮೂಲಕಾರಣನಾದ ದುಷ್ಕಾಮನನ್ನು ದಹಿಸಿ ಮಾನವೀಯತೆಯನ್ನು ಬೆಳೆಸಿಕೊಳ್ಳಬೇಕು, ಶಿವನ ಮೂರನೇ ಕಣ್ಣು ಜ್ಞಾನ–ಚಕ್ಷು; ಕಾಮವೆಂದರೆ ದುರಾಶೆ. ಹೀಗೆ ಜ್ಞಾನಚಕ್ಷುವಿನಿಂದ ಅಥವಾ ವಿವೇಚನಾ ಜ್ಞಾನದಿಂದ ತಮ್ಮ ತಮ್ಮ ದುರಾಶೆಗಳನ್ನು ದಹನಮಾಡಿ ತಮ್ಮ ಉಜ್ವಲವಾದ ಭವಿಷ್ಯವನ್ನು ರೂಪಿಸಿಕೊಳ್ಳುವುದು ಈ ಹೋಳಿ ಹಬ್ಬದಾಚರಣೆಯ ಮುಖ್ಯ ಉದ್ದೇಶವಾಗಿದೆ.

ನಾವು ಸಾಮಾನ್ಯವಾಗಿ ಫಾಲ್ಗುಣಶುಕ್ಲಪಂಚಮ್ಯಾದಿ ದಿನಗಳಲ್ಲಿ ಹೋಲಿಕಾದಹನದ ಸಲುವಾಗಿ ಕುಳ್ಳು–ಕಟ್ಟಿಗೆಗಳನ್ನು ಕದಿಯುವುದು, ಹರಿಜನ ಕೇರಿಯಿಂದ ಅಗ್ನಿಯನ್ನು ತರುವುದು, ಲಿಂಗ ಭಗಾಂಕಿತ ಶಬ್ದಗಳನ್ನಾಡುವದು, ಇತ್ಯಾದಿಗಳನ್ನು ಕಾಣುತ್ತೇವೆ. ಇದು ಕೇವಲ ಸಂಪ್ರದಾಯ ಬದ್ಧವಾಗಿದೆಯಲ್ಲದೇ ಶಾಸ್ತ್ರೋಚಿತವೂ ಆಗಿದೆ. ಆವತ್ತಿನ ಕಾರ್ಯಗಳೆಲ್ಲವೂ ಹೋಲಿಕಾ ರಾಕ್ಷಸಿಯ ಪೀಡಾಪರಿಹಾರಕಗಳೆಂಬುದನ್ನು ಜ್ಯೋತಿರ್ನಿಬಂಧದಲ್ಲಿ ಹೇಳಿದೆ.

ಪಂಚಮೀ ಪ್ರಮುಖಾಸ್ತಾಸು ತಿಥಯೋಽನಂತ
ಪುಣ್ಯದಾಃ ।
ದಶ ಸ್ಯುಃ ಶೋಭನಾಸ್ತಾಸು ಕಾಷ್ಠಸ್ತೇಯಂ
ವಿಧೀಯತೇ ॥
ಚಾಂಡಾಲಸೂತಿಕಾಗೇಹಾತ್ ಶಿಶುಹಾರಿತ
ವಹ್ನಿನಾ ।
ಪ್ರಾಪ್ತಾಯಾಂ ಪೂರ್ಣಿಮಾಯಾಂ ತು
ಕುರ್ಯಾತ್ ತತ್ಕಾಷ್ಠದೀಪನಮ್ ॥
ತಮುಗ್ನಿಂ ತ್ರಿಃಪರಿಶ್ರಮ್ಯ ಶಬ್ದೈಃ ಲಿಂಗಭ
ಗಾಂಕಿತೈಃ ।
ತೇನ ಶಬ್ದೇನ ಸಾ ಪಾಪಾ ರಾಕ್ಷಸೀ ತೃಪ್ತಿ
ಮಾಪ್ನುಯಾತ್ ॥

ಈ ದಿವಸದ ನಿಶಾಗಮದಲ್ಲಿ ಚಿಕ್ಕಮಕ್ಕಳನ್ನು ಮನೆಯಲ್ಲಿಯೇ ಕಾಪಾಡಬೇಕು.ಮನೆಯ ಅಂಗಣ ಮಧ್ಯದಲ್ಲಿ ಗೋಮಯವನ್ನು ರೂಪಾಂತರಿಸಿ ಇಡಬೇಕು. ವ್ಯಗ್ರಗೊಂಡ ಕೆಲವು ಜನರು ರಾಕ್ಷಸಿಯ ಪೀಡೆಯಿಂದ ಶಿಶುಗಳನ್ನು ರಕ್ಷಿಸಲು ಕಾಷ್ಠದ ಖಡ್ಗಗಳಿಂದ ಹಾಸ್ಯರಸ ತುಂಬಿದ ಗೀತೆಗಳನ್ನು ಹಾಡುತ್ತ ಗೋಮಯಾಕಾರದ ಶಿಶುಗಳನ್ನು ರಕ್ಷಿಸುತ್ತಾರೆ, ನಂತರ ಅವುಗಳಿಗೆ ಗುಡ ಪಕ್ವಾನ್ನವನ್ನು ಅರ್ಪಿಸಬೇಕು. ಹೀಗೆ ಮಾಡಿದಲ್ಲಿ ಆ ರಾಕ್ಷಸಿಯ ಕಾಟವು ತಪ್ಪುವುದೆಂದು ಭವಿಷ್ಯೋತ್ತರ ಮತ್ತು ಮದನರತ್ನದಲ್ಲಿ ಹೇಳಿದೆ

ಅಸ್ಯಾಂ ನಿಶಾಗಮೇ ಪಾರ್ಥ ಸಂರಕ್ಷ್ಯಾಃ
ಶಿಶವೋ ಗೃಹೇ !

ಗೋಮಯೇನೋಪಲಿಪ್ತೇ ಚ ಸುಚತುಷ್ಕೇ
ಗೃಹಾಂಗಣೇ ॥
ಆಕಾರಯೇತ್ ಶಿಂಶುಪಾವಾನ್ ಬಹುವ್ಯಗ್ರ
ಕರಾನ್ನರಾನ್ ।
ತೇ ಕಾಷ್ಠಖಡ್ಗೈಃ ಸಂಸ್ಪೃಶ್ಯ ಗೀತೈಃ
ಹಾಸ್ಯಕರೈಃ ಶಿಶೂನ್ ॥
ರಕ್ಷಂತಿ ತೇಭ್ಯೋ ದಾತವ್ಯಂ ಗುಡ
ಪಕ್ವಾನ್ನಮೇವ ಚ ॥
ಏವಂ ಢುಂಢೇತಿ ರಾಕ್ಷಸ್ಯಾಃ ಸದೋಷಃ
ಪ್ರಶಮಂ ವ್ರಜೇತ್ ।
ಬಾಲಾನಾಂ ರಕ್ಷಣಂ ಕಾರ್ಯಂ ತಸ್ಮಾತ್
ತಸ್ಮಿನ್ ನಿಶಾಗಮೇ ॥

(ನಿರ್ಣಯ ಸಿಂಧು ; ಧರ್ಮಸಿಂಧು)

ರಾಕ್ಷಸ ಪೀಡಾಪರಹಾರಕ್ಕೋಸ್ಕರ ಕಟ್ಟಿಗೆಗಳನ್ನು ಕದಿಯಬೇಕು ಮತ್ತು ಲಿಂಗಭಗಾಂಕಿತ ಶಬ್ದಗಳನ್ನಾಡಬೇಕೆಂದು ಶಾಸ್ತ್ರಕಾರರು ಹೇಳುತ್ತಾರೆಂದು ಮಾನವೀಯತೆಯ ಸೀಮೆಯನ್ನು ದಾಟಿಹೋಗಬಾರದು. ಏಕೆಂದರೆ ಉಲ್ಲಾಸದ ದ್ಯೋತಕವಾದ ಈ ಹಬ್ಬವನ್ನು ಬಂಧು-ಬಾಂಧವರಿಂದ ಕೂಡಿಕೊಂಡು ಆನಂದದಿಂದ ಆಚರಿಸಬೇಕು. ಈ ಹಬ್ಬದ ನಿಜವಾದ ಅರಿಕೆಯನ್ನು ಹೊಂದಿ, ಆಚರಿಸಿದಲ್ಲಿ ಸಾಂಸ್ಕೃತಿಕವಾದ ಶಿಸ್ತು ವಿಕಾಸಗೊಳ್ಳುವದು, ವಾದ್ಯ–ನೃತ್ಯ ಇತ್ಯಾದಿ ಕಲೆಗಾರು ತಮ್ಮ ನಿಜವಾದ ಪ್ರತಿಭೆಯನ್ನು ಹೊರಸೂಸಲು ಯೋಗ್ಯವಾದ ಅವಕಾಶವನ್ನು ಒದಗಿಸಿ ಕೊಟ್ಟಂತಾಗುವುದು ಮತ್ತು ಈ ಹಬ್ಬದ ದಿನದಂದು ಪುರುಷೋತ್ತಮನಾದ ಗೋವಿಂದನನ್ನು ತೊಟ್ಟಿಲಲ್ಲಿ ತೂಗುತ್ತ ಅವನ ಭಜನೆಯನ್ನು ಮಾಡುವದರಿಂದ ಶಾಶ್ವತವಾದ ವಿಷ್ಣುಲೋಕ ಪ್ರಾಪ್ತಿಯಾಗುವದೆಂದು ಶೂಲಪಾಣಿಯ 'ದೋಲಾಯಾತ್ರವಿವೇಕ' ದಲ್ಲಿಯೂ, ಧರ್ಮಸಿಂಧುವಿನಲ್ಲಿಯೂ ಹೇಳಿದ್ದಾರೆ :–

ನರೋ ದೋಲಾಗತಂ ದೃಷ್ಟ್ವಾ ಗೋವಿಂದಂ
ಪುರುಷೋತ್ತಮಮ್ ।
ಫಾಲ್ಗುನ್ಯಾಂ ಸಂಯತೋ ಭೂತ್ವಾ
ಗೋವಿಂದಸ್ಯ ಪುರಂ ವ್ರಜೇತ್ ॥

ಹೀಗೆ, ಧರ್ಮಕ್ಕೆ ಅವಿರುದ್ಧವಾದ ಈ ಸಂಪ್ರದಾಯವನ್ನು ಬಂಗಾಲದಲ್ಲಿ ಈಗಲೂ ಅನುಸರಿಸುತ್ತಾರೆ, ಮತ್ತು ಈ ಹೋಲಿಕಾ ಉತ್ಸವವನ್ನು ವಿಶೇಷ ಸಂಭ್ರಮದಿಂದ ಆಚರಿಸುತ್ತಾರೆ.

**ಇನ್ನು ಹೋಲಿಕಾ ದಹನಕ್ಕೆ ಯೋಗ್ಯವಾದ ಕಾಲವು ಯಾವುದೆಂಬುದನ್ನು ವಿವೇಚಿಸೋಣ :–**

1) ಫಾಲ್ಗುಣ ಪೂರ್ಣಿಮೆಯು ಮನ್ವಾದಿ ತಿಥಿಯಾಗಿರುವುದು, ಹೋಲಿಕಾದಹನದ ದಿನವಾದ ಪೂರ್ಣಿಮೆಯು ಪ್ರದೋಷವ್ಯಾಪಿನಿಯಾಗಿದ್ದು, ಭದ್ರಾಕರಣದಿಂದ ಅಥವಾ ಭದ್ರಾಮುಖದಿಂದ ರಹಿತವಾಗಿರಬೇಕು. ಇದಕ್ಕೆ ಜ್ಯೋತಿರ್ನಿಬಂಧದಲ್ಲಿ ಹೀಗೆ ಹೇಳಿದೆ :–

ಪ್ರದೋಷವ್ಯಾಪಿನೀ ಗ್ರಾಹ್ಯಾ ಪೂರ್ಣಿಮಾ
ಫಾಲ್ಗುನೀ ಸದಾ ।
ತಸ್ಯಾಂ ಭದ್ರಾಮುಖಂ ತ್ಯಕ್ತ್ವಾ ಪೂಜ್ಯಾ
ಹೋಲಾ ನಿಶಾಮುಖೇ ॥

ಒಂದು ವೇಳೆ ಭದ್ರಾಕರಣದಲ್ಲಿ ದಹಿಸಿದ್ದಾದರೆ, ಯಾವ ಗ್ರಾಮದಲ್ಲಿ ದಹನಕಾರ್ಯವು ಆಗಿರುವುದೋ, ಆ ಗ್ರಾಮಕ್ಕೆ ದೊಡ್ಡ ಆಪತ್ತು ಬರುವುದೆಂದು ನಿರ್ಣಯಾಮೃತ, ಮದನರತ್ನ ಮತ್ತು ಪುರಾಣಸಮುಚ್ಚಯದಲ್ಲಿ ಹೀಗೆ ಹೇಳಿದೆ :–

ಭದ್ರಾಯಾಂ ದೀಪಿತಾ ಹೋಲಿ ರಾಷ್ಟ್ರಭಂಗಂ
ಕರೋತಿ ವೈ ।
ನಗರಸ್ಯ ಚ ನೈವೇಷ್ಟಾ ತಸ್ಮಾತ್ತಾಂ
ಪರಿವರ್ಜಯೇತ್ ॥
ಭದ್ರಾಯಾಂ ದ್ವೇ ನ ಕರ್ತವ್ಯೇ ಶ್ರಾವಣೀ
ಫಾಲ್ಗುನೀ ತಥಾ ।
ಶ್ರಾವಣೀ ನೃಪತಿಂ ಹಂತಿ ಗ್ರಾಮಂ ದಹತಿ
ಫಾಲ್ಗುನೀ ॥ (ನಿರ್ಣಯಸಿಂಧು)

ಇದೇ ವಿಷಯವನ್ನು ಕುರಿತು ಪಾಂಚರಾತ್ರಗಮದ ತಿಥಿನಿರ್ಣಯದಲ್ಲಿ ಹೀಗೆ ಹೇಳಿದೆ :–

ಭದ್ರಾಯಾಂ ನೈವ ಕರ್ತವ್ಯಾ ಶ್ರಾವಣೀ
ಫಾಲ್ಗುನೀ ತಥಾ ।
ಶ್ರಾವಣೀ ನೃಪತಿಂ ಹಂತಿ ರಾಷ್ಟ್ರಂ ದಹತಿ
ಫಾಲ್ಗುನೀ ॥
ತಸ್ಮಾತ್ ಭದ್ರಾಂ ಪರಿತ್ಯಜ್ಯ ಸಾಯಾ-
ಹ್ನವ್ಯಾಪಿನೀ ತಿಥಿಃ ॥

ಇದಲ್ಲದೇ ಆ ದಿವಸ ಪೂರ್ವಾನಕ್ಷತ್ರವೂ ಇರಬೇಕು :–

# ಅರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಅರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಅರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರು. 1500 ಹಣ ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿಯುಳ್ಳ ಬಂಗಾರದ ಪದಕಕೊಡಲ್ಪಡುತ್ತದೆ. ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಬಿಡಲಾಗುತ್ತದೆ.

**ತಿರುಮಲೆ ತಿರುಪತಿ ದೇವಸ್ಥಾನ.**

ಸಾಯಾಹ್ನವ್ಯಾಪಿನೀ ಯತ್ರ ಪೂರ್ವಾನಕ್ಷತ್ರ
ಸಂಯುತಾ ।
ಸಾ ಗ್ರಾಹ್ಯಾ ಸರ್ವದಾ ತತ್ರ ಕಾರ್ಯಾ ಸಾ
ಹೋಲಿಕಾ ಮತಾ ॥

2) ಚತುರ್ದಶೀ, ಹುಣ್ಣಿಮೆ ಈ ಎರಡೂ ದಿವಸ ಪ್ರದೋಷವ್ಯಾಪ್ತಿಯಿದ್ದರೆ,ಅಥವಾ ಎರಡನೇ ದಿವಸ ಪ್ರದೋಷವು ಏಕದೇಶವ್ಯಾಪ್ತಿಯಾಗಿದ್ದರೆ (ಸೂರ್ಯಾಸ್ತ ಪೂರ್ವದಲ್ಲಿ ಮೂರು ಘಳಿಗೆ, ಸೂರ್ಯಾಸ್ತಾನಂತರ ಮೂರು ಘಳಿಗೆ–ಹೀಗೆ ಆರು ಘಳಿಗೆಯ ಕಾಲಕ್ಕೆ ಪ್ರದೋಷವೆನ್ನುವರು.) ಪೂರ್ವದಿನ ಭದ್ರಾದೋಷವಿರುವ ನಿಮಿತ್ತದಿಂದ ಎರಡನೇ ದಿವಸವೇ ಹೋಲಿಕಾದಹನಕ್ಕೆ ಗ್ರಾಹ್ಯವು.

3) ಇನ್ನು, ಮೊದಲನೇ ದಿವಸ, ಪ್ರದೋಷ ದಲ್ಲಿ ಭದ್ರಾದೋಷವಿದ್ದು, ಎರಡನೇ ದಿವಸ ಅಂದರೆ ಪೂರ್ಣಿಮೆಯು ಪ್ರದೋಷಕ್ಕೆ ಸ್ಪರ್ಶ ವಿರದಿದ್ದ ಕಾಲದಲ್ಲಿ, ಪೂರ್ಣಿಮೆಯು ಪರದಿನದಲ್ಲಿ ಮೂರುವರೆ ಪ್ರಹರ (10½ತಾಸು), ಅಥವಾ ಅದಕ್ಕೂ ಹೆಚ್ಚಿಗಿದ್ದು ಮುಂದಿನ ಪ್ರತಿಪದೆಯು ವೃದ್ಧಿಯಾಗಿದ್ದರೆ, ಪೂರ್ವದಿನದ ಸಂಪೂರ್ಣರಾತ್ರಿ ಯಲ್ಲಿ ಭದ್ರಾಇರುವ ನಿಮಿತ್ತದಿಂದಲ್ಲದೇ ಹೋಲಿಕಾದಹನಕ್ಕೆ ಭದ್ರಾಸತ್ವವನ್ನು ನಿಷೇಧಿ ಸಿರುವುದರಿಂದ, ಪ್ರದೋಷವ್ಯಾಪಿನೀ ಪ್ರತಿಪದೆಯಲ್ಲಿ ಹೋಲಿಕಾದೀಪನವನ್ನು ಮಾಡತಕ್ಕದ್ದು. ಇದಕ್ಕೆ ಭವಿಷೋತ್ತರಪುರಾಣದಲ್ಲಿ ಹೀಗೆ ಹೇಳಿದೆ :–

ಸಾರ್ಧಯಾಮತ್ರಯಂ ವಾ ಸ್ಯಾತ್ ದ್ವಿತೀಯ
ದಿವಸೇ ಯದಾ ।
ಪ್ರತಿಪದ್ವರ್ಧಮಾನಾಸ್ತು ತದಾ ಸಾ
ಹೋಲಿಕಾ ಸ್ಮೃತಾ॥ (ನಿರ್ಣಯಸಿಂಧು)

ಇದನ್ನೇ ತಿಥಿನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ :–

ಯಾಮತ್ರಯೋರ್ಧ್ವಗಾಮೀ ಚ
ಚತುರ್ದಶ್ಯಾಂ ತು ಪೂರ್ಣಿಮಾ ।
ಪ್ರದೋಷವ್ಯಾಪಿನೀ ಚಾಪಿ ಪೂರ್ಣಿಮಾ
ನೈವ ದೃಶ್ಯತೆ ॥

ತದಾ ಪರದಿನೇ ಕಾರ್ಯಂ ಹೋಲಿಕಾದಹನಂ
ರಮೇ ॥

4) ಪ್ರತಿಪದೆ ತಿಥಿಯು ಕಡಿಮೆ ಇದ್ದರೆ, ಹುಣ್ಣಿಮೆಯ ದಿವಸ ಭದ್ರಾ ಇದ್ದರೂ, ಭದ್ರಾ ಮುಖವನ್ನು (ಮುಖವೆಂದರೆ 4ನೇ ಚರಣದ ಮೊದಲನೇ 4 ಅಥವಾ 5 ಘಳಿಗೆ) ಅಥವಾ ಉಳಿದ ಭದ್ರಾಭಾಗದಲ್ಲಿ ಹೋಲಿಯ ಧಹನವು ಗ್ರಾಹ್ಯವು. ಇದಕ್ಕೆ ಜ್ಯೋತಿರ್ನಿಬಂಧದಲ್ಲಿ ಹೀಗೆ ಹೇಳಿದೆ :–

ಪ್ರದೋಷವ್ಯಾಪಿನೀಪೂರ್ವೇ ಭದ್ರಾಯುಕ್ತಾ
ಯದಾ ಭವೇತ್ ।
ಪರೇ ಅನವಕಾಶೇ ತು ಭದ್ರಾಪುಚ್ಛೇ ತು
ಕಾರಯೇತ್ ॥
ಭದ್ರಾಮುಖಂ ಪರಿತ್ಯಜ್ಯ ಪೂರ್ವದ್ಯುರಿತಿ
ನಿರ್ಣಯಮ್ ॥

5) ಪರದಿನ (ಪ್ರತಿಪದೆ)ದಲ್ಲಿ ಪ್ರದೋಷ ಸ್ಪರ್ಶವಿಲ್ಲದಾಗ' ಮೊದಲನೇ ದಿನ (ಪೂರ್ಣಿಮಾ) ದಲ್ಲಿ ನಿಷೇಧಕ್ಕಿಂತ ಮೊದಲು ಭದ್ರಾಸಮಾಪ್ತಿ ಯಾಗುತ್ತಿದ್ದರೆ, ಭದ್ರಾಮುಗಿದ ನಂತರವೇ ಹೋಲಿಕಾದಹನ ಮಾಡಬೇಕು.

6) ಒಂದು ವೇಳೆ ಪೂರ್ಣಿಮೆಯ ದಿವಸ ನಿಶೀ ಥಾನಂತರದಲ್ಲಿ (12 ಗಂಟೆ ನಂತರ) ಭದ್ರಾಸ ಮಾಪ್ತಿಯಾಗುತ್ತಿದ್ದರೆ ಭದ್ರಾಮುಖವನ್ನು ತ್ಯಜಸಿ ಉಳಿದ ಭದ್ರಾಭಾಗದಲ್ಲಿ ದಹನಮಾಡಬೇಕು.

7) ಪ್ರದೋಷದಲ್ಲಿ ಭದ್ರಾಮುಖವ್ಯಾಪ್ತಿ ಇದ್ದರೆ ಭದ್ರಾನಂತರವಾಗಲೀ ಪ್ರದೋಷಾನಂತರವಾ ಗಲೀ ಹೋಲಿಕಾದಹನ ಮಾಡತಕ್ಕದ್ದು.

8) ಪೂರ್ಣಿಮೆಯ ದಿವಸ ಚಂದ್ರಗ್ರಹಣವಿದ್ದರೆ ವೇಧ ಮಧ್ಯದಲ್ಲಿ ಹೋಲಿದಹನವು ಗ್ರಾಹ್ಯ. ಗ್ರಸ್ತೋದಯವಾದಾಗ, ಪೂರ್ಣಿಮೆಯ ದಿವಸ ಚಂದ್ರೋದಯವು ಗ್ರಹಣಗ್ರಸ್ತವಾಗುತ್ತಿದ್ದರೆ ಪ್ರತಿಪದೆಯ ದಿವಸ ಪ್ರದೋಷಕಾಲದಲ್ಲಿ ಪೂರ್ಣಿ ಮೆಯಿದ್ದರೆ ಗ್ರಹಣದ ಮಧ್ಯಕಾಲದಲ್ಲಿಯೇ ಮಾಡ ಬೇಕು, ಇರದಿದ್ದರೆ ಚತುರ್ದಶಿಯಲ್ಲಿ ಮಾಡ ಬೇಕು.

ಇದೇ ವಿಷಯವನ್ನು ನಿರ್ಣಯಸಿಂಧುಕಾರರು ಬೇರೆ ರೀತಿಯಿಂದ ಹೇಳಿರುವರು:

ಪೂರ್ಣಿಮೆಯ ದಿವಸ ಚಂದ್ರಗ್ರಹಣವಿದ್ದರೆ ಭದ್ರಾದಿಂದ ರಹಿತವಾದ ನಿಶೀಥದ ಮೊದಲನೇ ಭಾಗದಲ್ಲಿ ಹೋಲಿಕಾದಹನವು ಗ್ರಾಹ್ಯ. ಗ್ರಸ್ತೋದಯವಿದ್ದರೆ, ಚತುರ್ದಶೀ ದಿವಸ–ಭದ್ರಾ ದಿಂದ ವರ್ಜ್ಯವಾದ ರಾತ್ರಿಯ ಚತುರ್ಥಯಾಮ ದಲ್ಲಿ ಅಥವಾ ವಿಷ್ಟಿಪುಚ್ಛದಲ್ಲಿ ದಹನಮಾಡಬೇಕು.

ಅತ್ರಚೇತ್ ಚಂದ್ರಗ್ರಹಣಂ ತತೋ
ಅಹರ್ನಿಶಿ ಭದ್ರಾವರ್ಜ-
ಪೌರ್ಣಮಾಸ್ಯಾಂ ಹೋಲಿಕಾದೀಪನಮ್ ।
ಅಥ ಪರೇ ಅಹ್ನಿ
ಗ್ರಸೋದಯ ಸ್ತದಾ ಪೂರ್ವದಿನೇ ಭದ್ರಾ
ವರ್ಜ್ಯಂ
ರಾತ್ರಿ ಚತುರ್ಥಯಾಮೇ ವಿಷ್ಟಿಪುಚ್ಛೇ ವಾ
ಹೋಲಿಕಾ ಸ್ಮೃತಾ ॥

ಇವುಗಳ ಹೊರತಾಗಿ ಪರದಿನ ಪ್ರದೋಷಾದಿ ಯಾದ ಸಾಯಾಹ್ನಾದಿ-ಹಗಲಿನಲ್ಲಾಗಲೀ ಚತು ರ್ದಶಿಯಲ್ಲಾಗಲೀ ಹೋಲಿಕಾದಹನವು ಧರ್ಮ ಶಾಸ್ತ್ರದ ನಿರ್ಣಯಕ್ಕೆ ತೀರಾವಿರುದ್ಧವಾದದ್ದು.

ಇದಕ್ಕೆ ದಿವೋದಾಸೀಯದಲ್ಲಿ ಹೀಗೆ ಹೇಳಿದೆ:—

ನಿಶಾಗಮೇ ಪ್ರಪೂಜಯೇತ್ ಹೋಲಿಕಾಂ
ಸರ್ವದಾ ಬುಧೈಃ ।
ನ ದಿವಾ ಪ್ರಪೂಜಯೇತ್ ಢುಂಢಾಂ;
ಪೂಜಿತಾ ದುಃಖದಾ ಭವೇತ್ ॥
(ನಿರ್ಣಯಸಿಂಧು)

ಈ ನಿರ್ಣಯದ ಪ್ರಕಾರ ಹೋಳಿಹಬ್ಬವನ್ನು ಆಚರಿಸುವದರಿಂದ ಉಂಟಾಗುವ ಶ್ರೇಯಸ್ಸು ಕೇವಲ ಒಂದು ಜನಾಂಗಕ್ಕೆ ಸೀಮಿತವಾದದ್ದಲ್ಲ, ಇಡೀ ದೇಶಕ್ಕೆ ದೇಶವೇ ಶ್ರೇಯೋಮುಖಿಯಾಗು ವುದು. ನಂತರ ಎಲ್ಲೆಲ್ಲಿಯೂ ಶಾಶ್ವತವಾಗಿ ಶಾಂತಿ ಶಿಸ್ತು ನೆಲೆಗೊಳ್ಳುವುದು.

ಹೀಗೆ ಇಹದಲ್ಲಿ ಸುಖವನ್ನೂ, ಪರದಲ್ಲಿ ಆನಂದ ವನ್ನು ಹೊಂದಲು ಈ ಹಬ್ಬದ ದಿನದಂದು ಸಂಸ್ಕೃತಿ ಸಂವರ್ಧಕವಾದ, ಸಂಪ್ರದಾಯಕ್ಕನುಬದ್ಧವಾದ, ಧರ್ಮಶಾಸ್ತ್ರಕ್ಕೆ ಅವಿರುದ್ಧವಾದ, ನಾಗರಿಕತೆಯ ಸೀಮೆಯನ್ನು ಮೀರದ, ವಿಶೇಷಕಾರ್ಯಕಲಾ ಪಗಳನ್ನು ವಿಜೃಂಭಣೆಯಿಂದ ನೆರವೇರಿಸಬೇಕು. ಈ ರೀತಿ ಆಚರಿಸುವ ಒಂದು ಸತ್ಸಂಪ್ರದಾಯ ವನ್ನು ತಿಳಿಸಿಕೊಡುವುದೇ ಹುತಾಶನೀ ಪೂರ್ಣಿ ಮೆಯ ಮುಖ್ಯಕೊಡುಗೆ ಎಂದು ಹೇಳಬಹುದು.

★

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಅರ್ಧ ಶತಕದ ಆರ್ಷೇಯ ಮೂರ್ತಿ



"ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಎಂಬುದು ತಿಳಿದ ಗಾದೆಯಾದರೂ ಇದು ಯಾರಿಗೆ ನೈಜವಾಗಿ ಹೊಂದುವುದು ಎಂಬುದನ್ನು ಒಮ್ಮೆ ವಿವೇಚನದಿಂದ ಆಲೋಚಿಸಿದಲ್ಲಿ ಅದು ಈ ಶತಮಾನದ ವ್ಯಕ್ತಿ ಎನಿಸಿದ, ಪ್ರಾತಃಸ್ಮರಣೀಯರಾದ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶ್ವರ ತೀರ್ಥ ಶ್ರೀ ಪಾದಂಗಳವರಿಗಲ್ಲದೆ ಅಲ್ಲ ಎಂಬುದು ಸ್ಪಷ್ಟವಾಗುವುದು. ಇವರ ಹೆಸರು ಅನ್ವರ್ಥವಾದುದೇ ಸರಿ. ಶ್ರೀ ಉಡುಪಿ ಅಷ್ಟ ಮಠಾಧಿಗಳ ವಿಚಾರ ಶ್ರೀ ಪೇಜಾವರ ಶ್ರೀ ಪಾದಂಗಳವರಿಗೆ ಮೊದಲು ಇತರ ಕಡೆಗಳಲ್ಲಿ ಅಷ್ಟಾಗಿ ಗೊತ್ತಾಗಿರಲಿಲ್ಲ. "ಯಾವ ಹುತ್ತದಲ್ಲಿ ಯಾವ ಹಾವು ಇರುವುದೋ" ಯಾರಿಗೆ ತಾನೆ ಗೊತ್ತು. ಅವರವರ ಮನೋವಿಕಾಸ ಕಾರ್ಯಾದಿಗಳಿಂದಲೇ ತಿಳಿಯಬಹುದಾಗಿದೆ. ವಜ್ರ ಎಲ್ಲಿಟ್ಟರೂ ವಜ್ರವೇ ! ಬೆಲೆಯಲ್ಲಿ ಏನೇನೂ ಕಮ್ಮಿಯಾಗಲಾರದು.

ಪ್ರಕೃತ ಮಹಾನುಭಾವರಾದ ನಮ್ಮ ಶ್ರೀ ಶ್ರೀ ವಿಶ್ವೇಶ್ವರ ತೀರ್ಥ ಶ್ರೀ ಪಾದಂಗಳವರು ತಮ್ಮ ಪವಿತ್ರ ಜೀವನದ ಆರ್ಧ ಶತಮಾನವನ್ನು ದಾಟುತ್ತಲಿರುವುದು ಇಡೀ ಭರತ ಖಂಡದ ಸಕಲ ಆಸ್ತಿಕ ಸಮಾಜಾದಿಗಳಿಗೊಂದು ಅಮಿತಾನಂದದ ಘಟ್ಟವಾಗಿದೆ. ಇವರು ಅಸೀಮ ಮಹಿಮರು, ಅಪಾರ ಶಕ್ತರು, ಅಗಣಿತ ಜನಾನುರಾಗಿಗಳು. ಅವರ್ಣನೀಯ ವಿವೇಕಿಗಳು, ಸಕಲ ಆಗಮ ವೇದ್ಯರು. ಹಾಗೂ ಶ್ರೀ ಮದಾಚಾರ್ಯರ ಕರುಣಾಪಾತ್ರರು. ತತ್ವಜ್ಞಾನ ವಿಪ್ಲವ ಕಾಲವಾದ ಈ ಇಪ್ಪತ್ತನೆಯ ಶತಮಾನಕ್ಕೇನಾದರೂ ಈ ಮಹಾನುಭಾವರು ಲಭಿಸದಿದ್ದಿದ್ದರೆ ಇಡೀ ಸಾತ್ವಿಜಕನಾಂಗಕ್ಕೆ ನಷ್ಟ ಆಗುತ್ತಿತ್ತು. ಜೀವೋತ್ತಮರಾದ ವಾಯುದೇವರು ಹಾಗೂ ಇಂದ್ರಾದಿ ದೇವತೆಗಳೇ ಕಲಿಯುಗದಲ್ಲಿ ಸನ್ಯಾಸಿಗಳಾಗಿ ಕೇವಲ ಜ್ಞಾನ ಪ್ರಚಾರಕ್ಕಾಗಿ ಅವತರಿಸಿ ರಚಿಸಿದ ಸರ್ವಮೂಲ ಹಾಗೂ ಟೀಕಾ ಟಿಪ್ಪಣಿ ಗ್ರಂಥಾದಿಗಳನ್ನು ಮಹಾನುಭಾವರಾಗಿ ಜಗತ್ತಿನಲ್ಲಿ ಅತ್ಯಾಶ್ಚರ್ಯಕರವಾದ ಅತಿಮಾನುಷ ಕಾರ್ಯಗಳನ್ನು ಮಾಡಿದ ಸೂರ್ಯನಂತೆ ತೇಜಃ ಪುಂಜರಾದ ಉತ್ತರಾಧಿ ಮಠಾಧೀಶರಾಗಿದ್ದ ಶ್ರೀಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರಲ್ಲಿ ಸಕ್ರಮ ಅಧ್ಯಯನಮಾಡಿ ಜ್ಞಾನ, ಭಕ್ತಿ, ವೈರಾಗ್ಯಾದಿ ಸದ್ಗುಣಪೂರ್ಣರಾದ ಶ್ರೀ ಶ್ರೀ ಬಂಡಾರಗೇರಿ ಶ್ರೀಪಾದಂಗಳಲ್ಲಿ ಸಾಂಪ್ರದಾಯಕ ಕ್ರಮದಲ್ಲಿ ಅಧ್ಯಯನಮಾಡಿ, ಆ ಆಧ್ಯಾತ್ಮ ಜ್ಞಾನ ಭಂಡಾರವನ್ನು ತಾವೊಬ್ಬರೇ ಇಟ್ಟುಕೊಳ್ಳದೆ. ಆದನ್ನು ಆಧುನಿಕ, ಆಸ್ತಿಕ ವರ್ಗಕ್ಕೆ ತಮ್ಮ ಸುಲಭ ಕ್ರಮದ ನಿದರ್ಶನಾಮಯ ಉಪನ್ಯಾಸಾದಿಗಳಿಂದ ಉಪದೇಶಿಸಿ. ಜಗತ್ತಿನಲ್ಲಿ ಆಧ್ಯಾತ್ಮಕ್ರಾಂತಿಯನ್ನೇ ಉಂಟುಮಾಡುತ್ತಿರುವ ನೈಜ ಸತ್ಯಾಗ್ರಹಿಗಳೆಂದರೆ ನಮ್ಮ ಶ್ರೀ ಶ್ರೀ ಪೇಜಾವರ ಶ್ರೀಪಾದಂಗಳವರು. ಇವರ ಹೆಸರು ಕೇಳದವರಿಲ್ಲ. ಶ್ರೀ ವಾಮನನಾಗಿ ಬಂದು ಶ್ರೀ ತ್ರಿವಿಕ್ರಮರಂತೆ ಕಾರ್ಯಮಾಡುತ್ತಲಿರುವರು.

---

**ಚಿಂಚೋಳಿ ಪ್ರಹ್ಲಾದಾಚಾರ್ಯ**

---

ಶ್ರೀ ಪೇಜಾವರ ಮಠ ಉಡುಪಿ ಅಷ್ಟ ಮಠದಲ್ಲಿ ಒಂದು. ಐಶ್ವರ್ಯಾದಿಗಳಲ್ಲಾಗಲಿ, ವಿಸ್ತಾರಾದಿಗಳಲ್ಲಾಗಲಿ: ಅಷ್ಟಾಗಿ ದೊಡ್ಡದಲ್ಲದಿದ್ದರೂ ಒಬ್ಬ ವ್ಯಕ್ತಿಯ ತಪಃ ಪ್ರಭಾವದಿಂದ ಜಗದ್ವಿಖ್ಯಾತವಾಗಿದೆ. ಇವರು ಸಕಲ ಮತೀಯರಿಗೂ ಹಾಗೂ ಸಕಲ ಮಠೀಯರಿಗೂ ಬೇಕಾದ ವ್ಯಕ್ತಿಗಳು. ಮೇಲಿಂದ ಬಿದ್ದ ಗಾಜಿನ ಪಾತ್ರೆ ನುಚ್ಚು ನೂರಾದಂತೆ ಒಡೆದಿದ್ದ ಮಾಧ್ವಸಮಾಜವನ್ನು "ಅಖಿಲ ಭಾರತ ಮಾಧ್ವ ಮಹಾಮಂಡಲಿ" ಎಂಬ ಹೆಸರಿನಿಂದ ಒಂದುಗೂಡಿಸಿದ ಸಾಹಸಿಗಳು.

ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶ್ವರ ತೀರ್ಥ ಶ್ರೀ ಪಾದಂಗಳವರು ಉಡುಪಿಯ ಸಮೀಪದ ರಾಮಕುಂಜ ಎಂಬ ಸ್ಥಳದಲ್ಲಿ ನಾರಾಯಣಾಚಾರ್ಯ ಹಾಗೂ ಶ್ರೀಮತಿ ಕಮಲಮ್ಮ ಎಂಬ ಪವಿತ್ರ ದಂಪತಿಗಳಲ್ಲಿ 1931 ರಲ್ಲಿ ಜನ್ಮವೆತ್ತಿ ವೆಂಕಟರಮಣ ಎಂಬ ಹೆಸರನ್ನು ಪಡೆದರು. 1938 ರಲ್ಲಿ ಅಂದರೆ ಕೇವಲ 7 ನೇ ವರ್ಷದಲ್ಲೇ ಶ್ರೀ ಚಕ್ರತೀರ್ಥದಲ್ಲಿ ಆಶ್ರಮವನ್ನು ಸ್ವೀಕರಿಸಿ, ಯಾವ ಶ್ರೀಮದ್ಭಾಗವತದ ಹನ್ನೆರಡು ಸ್ಕಂಧಗಳಿಗೂ ದಿವ್ಯತರವಾದ ವ್ಯಾಖ್ಯಾನವನ್ನು ಬರೆದ ಮಹಾಮಹಿಮರಾದ ಶ್ರೀ ವಿಜಯ ದ್ವಿಜರ ಪರಂಪರೆಯ ಪವಿತ್ರ ಪೀಠ ಅಲಂಕರಿಸಿ; ಈ ಹಿಂದೆಯೆ ನಿರೂಪಿಸಿದಂತೆ ಶ್ರೀ ಭಂಡಾರಗೇರಿ ಶ್ರೀ ಪಾದಂಗಳವರಲ್ಲಿ ಸಕಲ ಶಾಸ್ತ್ರಾಧ್ಯಯನ ಮಾಡಿ, ಇನ್ನೂ ಕೇವಲ ಎಳೆಯ ವಯಸ್ಸಿನಲ್ಲಿಯೇ ಮಾಧ್ವ ಸಮಾಜ ಛಿದ್ರಛಿದ್ರವಾಗಿರುವುದಕ್ಕೆ ಮರುಗಿ ಮಹಾ

# ಕಿಶೋರ ಜಗತ್



## ಮುದ್ದು ಕೃಷ್ಣ

ಸುಳ್ಳ ಹೇಳುವಿರೇಕೆ ನಮ್ಮ ಗೋಪನ ಮೇಲೆ
ಸುಳ್ಳ ಹೇಳುವಿರೇಕೆ ನೀವೆಲ್ಲ ?
ಬೆಣ್ಣೆ ಮೊಸರಿನ ಮಡಕೆ ಸಾಲುಸಾಲುಗಳಲ್ಲಿ
ಇಹವು ನೋಡಿರೆ ನಮ್ಮ ಮನೆಯಲ್ಲಿ.
ಕಮ್ಮಿ ಏನಿದೆ ಅವಗೆ ನಿಮ್ಮ ಮಡಕೆಯ ಒಡೆಯ
ಕದ್ದು ತಿನ್ನಲು ಬೆಣ್ಣೆ ಹೇಳಿರೆ ?

ಏನಮ್ಮ ಭಾಗ್ಯವತಿ ನೀನು ಹೇಳುವುದೇನು
ಸುಳ್ಳು ಹೇಳಲು ನಾವು ಬಂದೆವೇನು ?
ನಮ್ಮ ಮನೆ ಮಡಕೆ ಒಡೆದು ಚೂರಾಗಿಹುದು
ದಿನವೆಲ್ಲ ಕೂಡಿಟ್ಟ ಹಾಲು ಹಾಳು.

ಒಂದು ದಿನದಲ್ಲ ಒಂದು ಗಳಿಗೆಯದಲ್ಲ
ಪ್ರತಿದಿನವು ಇದೆ ಗೋಳು ಕೇಳು ಕೇಳು.

ಒಪ್ಪಲಾರೆ ಒಪ್ಪಲಾರೆ ನಿಮ್ಮ ಮಾತನು
ನನ್ನ ಕೃಷ್ಣ ಕಳ್ಳನೆಂದು ಹೇಳಲಾರೆನು.
ನನ್ನ ಮುದ್ದು ಕೃಷ್ಣನು ತುಂಬ ಸಭ್ಯನು
ನನ್ನ ಹೇಳಿಕೇಳದೆಯೇ ಏನುಮಾಡನು.
ಬನ್ನಿರೆ ಹೋಗುವ ಎಲ್ಲರು ಈಗ
ಸಿಕ್ಕಲಿ ಕಳ್ಳ ಕೈಯಿಗೆ ಆಗ

ಕಂಬಕ್ಕೆ ಕಟ್ಟಿಹಾಕಿ ಕರೆದು ತೋರುವ
ಕಳ್ಳನಾರು ಹೇಳೆಂದು ಇವಳ ಕೇಳುವ.

ಬೇಡಿರಮ್ಮ ಬೇಡಿರೆ ಅಂಥ ಸೊಲ್ಲನುಡಿಯದಿರಿ.
ಮಗನು ನಮಗೆ ಮಾತ್ರವೇನು ನಮ್ಮ
ಕೃಷ್ಣನು

ನೋಡಿ ಅವನ ನೋಡಿಹೇಳಿ ಅವನು ಬೆಣ್ಣೆ
ಕದ್ದನೆಂದು
ನೀವೆ ಪೇಳ್ವ ಶಿಕ್ಷೆಯನ್ನು ಇಲ್ಲಿ ಕೊಡುವೆನು.
ಇಲ್ಲ ತಾಯಿ ಇಲ್ಲ ಇಲ್ಲ, ಅವನು ಬೆಣ್ಣೆ
ಕದಿಯಲಿಲ್ಲ

ಬದಲು ನಮ್ಮ ಮನವಕದ್ದ
ಅವನು ನಿಮ್ಮ ಮಗನೆ ತಾಯಿ ಚೆಲ್ವಕೃಷ್ಣನು
ಅಲ್ಲ ಅಲ್ಲ ನಮ್ಮ ಮಗನು ಮುದ್ದುಕೃಷ್ಣನು.

**ನಾ. ಗೀತಾಚಾರ್ಯ.**

---

## ಪಂಚತಂತ್ರದ ಕಥೆ

**ಎಸ್. ವಿ. ಹೇಮಾವತಿ,** ಎಂ. ಎ.

ಒಂದು ಊರಿನೊಂದು ಕೆರೆಯ
ನೀರಿನಲ್ಲಿ ಮೂರು ಮೀನು
ಹೆಚ್ಚು ಸೊಗದಿ ಬಾಳ್ವೆಯನ್ನು
ನಡೆಸುತ್ತಿದ್ದವು.

ಒಮ್ಮೆ ಮೀನುಗಾರನೊಬ್ಬ
ಕೆರೆಯ ಬಳಿಗೆ ಬಂದು ನಿಂತು
ನೀರಲಿದ್ದ ಮೀನರಾಶಿ
ಯನ್ನು ಕಂಡನು.

ನಾಳೆ ಬಂದು ಇಲ್ಲಿ ಇರುವ
ಮೀನು ಬಲೆಯ ತುಂಬ ಹಿಡಿದು
ಮಾರಿ ಲಾಭ ಪಡೆಯಬಹುದು
ಎಂದು ಕೊಂಡನು.

ಮುಂದೆ ಬರುವ ಕಷ್ಟ ನೆನೆದು
ಒಂದು ಬುದ್ಧಿವಂತ ಮೀನು
ಮೊದಲೆ ಜಾಗ ಖಾಲಿ ಮಾಡಿ
ದೂರ ಹೋಯಿತು.

ಮೀನುಗಾರ ಕೆರೆಯ ದಡಕೆ
ಬಂದು ಬಲೆಯ ಬೀಸಿದಾಗ
ಇದ್ದ ಎರಡರಲ್ಲಿ ಒಂದು
ಸುಮ್ಮ ನಿದ್ದಿತು.

ಉಸಿರು ಕಟ್ಟಿ ಸತ್ತಹಾಗೆ
ನಟನೆಯನ್ನು ಮಾಡಿದಾಗ
ಮೀನುಗಾರ ಅದನು ನೋಡಿ
ಎಸೆದು ಬಿಟ್ಟನು.

ಮತ್ತೆ ಒಮ್ಮೆ ಬಲೆಯ ಹಾಕಿ
ಸೆಳೆದು ನೋಡೆ ಕೊನೆಯ ಮೀನು
ಬೆಳ್ಳಿಯಂತೆ ಹೊಳೆಯತಿರಲು
ಕೊಂಡು ಒಯ್ದನು.

ಹೀಗೆ ಮೊದಲ ಎರಡು ಮೀನು
ತಮ್ಮ ಜಾಣ ಬುದ್ಧಿಯಿಂದ
ಜೀವವನ್ನು ಉಳಿಸಿಕೊಂಡು
ಬದುಕಿ ಕೊಂಡವು.

ಕೊನೆಯ ಮೀನು ಮಾತ್ರ ತನ್ನ
ದಡ್ಡತನದ ಕೆಲಸದಿಂದ
ಬಂದುದೆಲ್ಲ ಬರಲಿ ಎಂದು
ಪ್ರಾಣ ಬಿಟ್ಟಿತು.

ಮುಂದೆ ಬರುವ ಕಷ್ಟಗಳಿಗೆ
ಮೊದಲೆ ದಾರಿ ತಿಳಿದುಕೊಂಡು
ಬಂದುದನ್ನು ಸುಲಭವಾಗಿ
ನೀಗಿ ಕೊಳುವುದು.

ಇಂಥ ನೀತಿ ಕಥನವನ್ನು
ದುರ್ಗಸಿಂಹ ನೆಂಬುವವನು
ದೇವಭಾಷೆಯಿಂದ
ಕನ್ನಡಕ್ಕೆ ತಂದನು.

ಮಕ್ಕಳಿರಾ ನೀವಿದನ್ನು
ಮನದಲಿಟ್ಟು ನಡೆಯಿರಿ
ಮೊದಲ ಎರಡು ಮೀನಿನಂತೆ
ಜಾಣರಾಗಿ ಬಾಳಿರಿ

1—4—81 ರಿಂದ
30—4—81 ವರೆಗೆ

# ನಿಮ್ಮ ಭವಿಷ್ಯ

ಡಾ॥ ಅರ್ಕ ಸೋಮಯಾಜಿ.



## ಮೇಷ :

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

ಅನಗತ್ಯ ವೆಚ್ಚ ಅಥವಾ ಧನನಷ್ಟ, ಮನೆಯೊಳಗೆ ಹಾಗೂ ಹೊರಗೆ ವಿವಾದ. ಹೆಂಡತಿಯ ಅತೃಪ್ತಿ ಅಥವಾ ನೇತ್ರಬಾಧೆ. ಏನೇ ಆದರೂ ತಿಂಗಳ ದ್ವಿತೀಯಾರ್ಧದಲ್ಲಿ ಪ್ರಣಯಭಾವ, ಹೊಸ ಉಡುಪುಗಳಿಂದ ಆನಂದ. ಧನನಷ್ಟವನ್ನುಂಟುಮಾಡುವ ದುಷ್ಟ ಸಲಹೆಗಳ ಬಗ್ಗೆ ಎಚ್ಚರ ವಹಿಸುವುದುತ್ತಮ.



## ವೃಷಭ :

( ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ತಿಂಗಳ ಪ್ರಥಮಾರ್ಧ ಅತ್ಯುತ್ತಮ. ಧನಲಾಭ, ವಸ್ತ್ರಲಾಭ, ಒಳ್ಳೆಯ ಸ್ನೇಹಿತರು. ಬಂಧುಗಳ ಆಗಮನ ಹಾಗೂ ಹಿರಿಯರ ಪ್ರಶಂಸೆ- ಮಕ್ಕಳಿಗೆ ಒಳ್ಳೆಯ ಕಾಲ. 16 ರ ವರೆಗೆ ಸಂತಸ. ನಂತರ ಅನಿರೀಕ್ಷಿತ ಧನವ್ಯಯ ಹಾಗೂ ಮನೆಯಲ್ಲಿ ವಿವಾದ.



## ಮಿಥುನ :

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ಕಾರ್ಯಜಯ, ಧನಲಾಭಗಳಿಂದ ತಿಂಗಳ ದ್ವಿತೀಯಾರ್ಧ ಉತ್ತಮ. ಬಂಧುಗಳಿಂದಾಗಿ ಚಿಂತೆ ಹಾಗೂ ಆಪ್ತರಿಂದ ತೊಂದರೆ. ಈ ರಾಶಿಯುವರು ಸ್ವಲ್ಪ ಅಪಮಾನ ಅಥವಾ ಅನಾರೋಗ್ಯ ಅಥವಾ ಶೋಷಣೆಗೆ ಒಳಗಾಗುವ ಸಂಭವವಿದೆ.



## ಕರ್ಕಾಟಕ :

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ತುಸು ಅನಾರೋಗ್ಯ ಹಾಗೂ ಸ್ವಲ್ಪ ಮಟ್ಟಿಗೆ ಶತ್ರುಗಳು, ಕುಜನರು ಈ ರಾಶಿಯವರಿಗೆ ತೊಂದರೆ ನೀಡಲೆತ್ನಿಸುವರು. ಆಗಾಗ ಪ್ರಯಾಣ ಸೂಚಿತ, ಅಗೌರವ ಅಥವಾ ಭರ್ತ್ಸನೆಯಿಂದ ನೋವು. ಆದರೂ ಚಿತ್ತಶಾಂತಿಯಿಂದ ಸ್ಥಿತಪ್ರಜ್ಞತೆ. ಹೊಸ ಉಡುಪು, ಪ್ರಣಯಭಾವ ಸೂಚಿತ, ತಿಂಗಳ ದ್ವಿತೀಯಾರ್ಧ ಉತ್ತಮ.



## ಸಿಂಹ :

(ಮಖ, ಪೂರ್ವ ಫಾಲ್ಗುಣ ಉತ್ತರ 1 ನೇ ಪಾದ:)

ಈ ರಾಶಿಯುವರು ಈ ತಿಂಗಳು ಒಳ್ಳೆಯ ಕಾಲವನ್ನು ಹೊಂದಿರುವುದಿಲ್ಲ, ಹೇರಳ ಧನ ನಷ್ಟ ಅಥವಾ ಧನವ್ಯಯ ಅಥವಾ ಅಗೌರವ, ಹೊಸ ಉಡುಪು ಹಾಗೂ ಧಾರ್ಮಿಕ ಪ್ರವರ್ತನೆ ಸೂಚಿತ. ಪ್ರಾರ್ಥನಾ ಮನೋಭಾವ ಹೊಂದುವುದುತ್ತಮ.



## ಕನ್ಯಾ :

(ಉತ್ತರ 2,3,4, ಪಾದ, ಹಸ್ತ ಚಿತ್ತ 1,2 ಪಾದ)

ಸ್ತ್ರೀಯರ ಮೂಲಕ ತೊಂದರೆ ಅಥವಾ ಗೃಹ ಕಲಹ ಅಥವಾ ಉದರ ಬಾಧೆ ಅಥವಾ ನೇತ್ರಭಾದೆ ತಿಂಗಳ ಎರಡನೇ ಅರ್ಧ ಅಧಿಕೃತವಾಗಿ ಒಳ್ಳೆಯದಲ್ಲ. ಪ್ರಾರ್ಥನಾ ಮನೋಭಾವದಿಂದ ಚಿಂತೆ ನಾಶವಾಗುವುದು.



## ತುಲಾ :

(ಚಿತ್ತ 3,4ಪಾದ ಸ್ವಾತಿ, ವಿಶಾಖಾ1,2,3 ಪಾದ)

ಈ ರಾಶಿಯ ಜನರು ಸಂತಸದಿಂದ ಕೂಡಿದ್ದು ಈ ತಿಂಗಳು ವಿಶೇಷ ಘಟನೆಗಳಿಲ್ಲದೆ ಮುಂದುವರೆಯುವುದು. ಪ್ರಯಾಣ, ಪ್ರಯಾಸ. ತಿಂಗಳ ದ್ವಿತೀಯಾರ್ಧದಲ್ಲಿ ಗೃಹಕಲಹ. ಸ್ತ್ರೀಯರಿಂದ ಬಹುಶಃ ತೊಂದರೆ, ಉದರಬಾಧೆ. ಒಟ್ಟಿನಲ್ಲಿ ತಿಂಗಳು ಪೂರ್ತಿ ಉತ್ತಮ.



## ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಈ ರಾಶಿಯುವರಿಗೆ ಧನಲಾಭ. ಯಶ ಸೂಚಿತವಾಗಿವೆ. ಒಳ್ಳೆಯ ಸ್ನೇಹಿತರು, ಬಂಧು ಆಗಮನ. ತಿಂಗಳ ಪ್ರಥಮಾರ್ಧದಲ್ಲಿ ಮಕ್ಕಳ ಮೂಲಕ ಅಥವಾ ವಿವಾದ ಮೂಲಕ ತುಸು ಚಿಂತೆ, ನಂತರ ಪ್ರಯತ್ನಗಳಲ್ಲಿ ಜಯ.



## ಧನುಸ್ಸು :

(ಮೂಲ, ಪೂ. ಉ. 1 ನೇ ಪಾದ)

ಈ ರಾಶಿಯುವರಿಗೆ ಈ ತಿಂಗಳು ಅನುಕೂಲಕರವಾಗಿಲ್ಲ. ಧನ ಹಾಗೂ ಗೌರವಗಳ ನಷ್ಟ. ತಿಂಗಳ ಪ್ರಥಮಾರ್ಧದಲ್ಲಿ ಗೃಹ ಕಲಹ, ನಂತರ ಮಕ್ಕಳಮೂಲಕ ತುಸು ಚಿಂತೆ, ಬಂಧುಗಳ ಆಗಮನ ಹಾಗೂ ಪ್ರಶಂಸೆ.

## ಮಕರ :

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

ಹೊಸ ಉಡುಪು, ಧನಲಾಭ, ಒಳ್ಳೆಯ ಸ್ನೇಹಿತರನ್ನು ನೀಡುವ ತಿಂಗಳ ಪ್ರಥಮಾರ್ಧ ಉತ್ತಮ. ನಂತರ ಉದರ ಬಾಧೆಯಿಂದಾಗಿ ಅಥವಾ ಜ್ವರದಿಂದಾಗಿ ವ್ಯಗ್ರತೆ. ಧನಲಾಭ, ಧಾನ್ಯಲಾಭ ಸೂಚಿತ. ಆದರೆ ತುಸು ಅಧಾರ್ಮಿಕ ಪ್ರವರ್ತನೆ.

## ಮೀನ :

(ಪೂ. ಭಾ. 4 ಪಾದ ಉ. ಭಾ. ರೇವತಿ)

ಈ ರಾಶಿಯವರಿಗೆ ತಿಂಗಳು ವಿಶೇಷ ಘಟನೆಗಳಿಲ್ಲದೆ ಅನುಕೂಲ. ಧನಲಾಭ ಹೊಸ ಸ್ನೇಹಿತರ ಮೂಲಕ ಅಭಿವೃದ್ಧಿ ಆಗಾಗ ಪ್ರಯಾಣ ಹಾಗೂ ಪ್ರಯಾಸ. ಅಥವಾ ಆಪ್ತರಿಂದ ಬೇರ್ಪಡೆ. ತಿಂಗಳ ಪ್ರಥಮಾರ್ಧದಲ್ಲಿ ಸ್ನೇಹಿತರಿಂದಾಗಿ ಪಾಪ ಪ್ರವರ್ತನೆ. ಆದರೆ ನಂತರ ಅನಾರೋಗ್ಯ.

## ಕುಂಭ :

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

ಆಗಾಗ ಪ್ರಯಾಣ. ಈ ರಾಶಿಯವರು ಪ್ರಣಯಭಾವ ಹೊಂದಿರುವರು. ತಿಂಗಳ ಪ್ರಥಮಾರ್ಧದಲ್ಲಿ ಸಂತಸ. ನಂತರ ಹೇರಳ ಧನವ್ಯಯ. ಮಕ್ಕಳ ಮೂಲಕ ತುಸು ಚಿಂತೆ.

---

ಶ್ರೀ ಪದ್ಮಾವತೀ ದೇವಾಲಯ

ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ವಾರ್ತಾಲಹರಿ

## ಫಲ ಪುಷ್ಪ ಪ್ರದರ್ಶನ

ಹಿಂದಿನ ಫೆಬ್ರವರಿ 15 ರಿಂದ ದೆಹಲಿಯಲ್ಲಿ ವೈ.ಎಂ.ಸಿ.ಎ. ಅವರು ಯೋಜಿಸಿದ ರಾಷ್ಟ್ರೀಯ ಫಲಪುಷ್ಪ ಪ್ರದರ್ಶನದಲ್ಲಿ ಆಂಧ್ರಪ್ರದೇಶದ ಪರವಾಗಿ ಭಾಗವಹಿಸಿದ ತಿ.ತಿ.ದೇ. ಉಪವನ ವಿಭಾಗವು ಪ್ರಥಮ ಬಹುಮಾನವನ್ನು ಗಳಿಸಿದ್ದೇ ಅಲ್ಲದೆ, ಆರ್.ಡಿ. ಬಿರ್ಲಾ ಅವರ ಪಂಥದ ರಜತ ಕರಂಡವನ್ನೂ ಗಳಿಸಿತು.

ತಿ.ತಿ.ದೇ. ಉಪವನಗಳಲ್ಲಿ ಬೆಳೆಸಲಾದ ಬಹುಕ್ಷೇಕ ಗಿಡಗಳನ್ನು ಕಸಿ ಮಾ ಡಿ ದ ವು ಗ ಳ ನ್ನೂ (ಸುಮಾರು ನಾಲ್ಕುನೂರು) ಅತಿ ಜಾಗ್ರತೆಯಿಂದ ಲಾರಿಗಳಲ್ಲಿ ಸಾಗಿಸಲಾಯಿತು. ಈ ಗಿಡಗಳಲ್ಲದೆ ದೆಹಲಿಯ ಜನ ಆಕರ್ಷಣೆಯಿಂದ ಮೂಕವಿಸ್ಮಿತರಾಗುವಂತಹ ಸುಮಾರು 1400 ವಿಧದ ಗುಲಾಬಿ ಹೂವುಗಳು, ವಿಧ ವಿಧವಾದ ಹೂವಿನ ಹಾರಗಳು ಆಶ್ಚರ್ಯವನ್ನುಂಟುಮಾಡುವ ತುರಾಯಿಗಳು, ಸ್ತ್ರೀಯರ ವಿವಿಧ ರೀತಿಯ ಕೇಶಾಲಂಕರಣ, ಮೊದಲಾದುವುಗಳು ಉಪವನ ವಿಭಾಗದ ಕುಶಲ ಕೆಲಸಗಾರರಿಂದ ನಡೆದಿದ್ದು, ಸ್ವಾಗತ ತೋರಣವು ತಿ.ತಿ.ದೇ. ಉಪವನ ವಿಭಾಗದ ಪುಷ್ಪಮಯ ಹೆಸರನ್ನು ಪಡೆದಿದ್ದು, ದೀಪಕನ್ಯೆಯರು ಜನಸಂದೋಹವನ್ನು ಸ್ವಾಗತಿಸುವಂತಿದ್ದರು. ಆಂಧ್ರಪ್ರದೇಶದಲ್ಲಿ ಸಾಧಾರಣವಾಗಿ ಬಳಕೆಯಲ್ಲಿರುವ ಎಲ್ಲ ಹೂವು ಹಣ್ಣು ತರಕಾರಿಗಳೂ ಇಲ್ಲಿ ಸ್ಥಳವನ್ನು ಪಡೆದಿದ್ದವು. ವಿವಿಧ ತರಕಾರಿಗಳಿಂದ ಮಾಡಿದ ಸ್ತ್ರೀ ಪುರುಷ ವಿಗ್ರಹಗಳು ಆಕರ್ಷಣೆಯ ಸೆಲೆಯಾಗಿದ್ದವು.

ಭಾರತದ ತೋಟಗಾರಿಕೆಯಲ್ಲಿ ಹೆಸರಾಂತ ಪಂಡಿತರಾದ ಡಾ॥ ಪಾಲ್, ಡಾ॥ ರಣದಿವೆ, ಹಾಗೂ ಶ್ರೀಮತಿ ಎಲಿಜಬೆತ್ ಥಾಂಸನ್ ಅವರುಗಳು ಪ್ರದರ್ಶನದ ತೀರ್ಪುಗಾರರಾಗಿದ್ದು ಪ್ರದರ್ಶನದಲ್ಲಿ ಈ ವಿಭಾಗ ಅತ್ಯುತ್ತಮವೆಂದು ನಿರ್ಣಯಿಸಿದರು.

ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾಗಾಂಧಿ ಅವರು ಅನಿರೀಕ್ಷಿತವಾಗಿ ಫಲಪುಷ್ಪ ಪ್ರದರ್ಶನಕ್ಕೆ ಬಂದಿದ್ದು, ತಿ.ತಿ.ದೇ. ಉಪವನ ವಿಭಾಗದಿಂದ ಆಕರ್ಷಿತರಾಗಿ ಸಾವಧಾನದಿಂದ ಎಲ್ಲವನ್ನೂ ನೋಡಿ ಸಂತಸ ಹೊಂದಿದ್ದೇ ಅಲ್ಲದೆ 'ಪ್ಲಾಂಟ್ ವೆಲ್ತ್ ಆಫ್ ತಿರುಮಲ' ಎಂಬ ಪುಸ್ತಕವನ್ನೂ ಬಿಡುಗಡೆ ಮಾಡಿದರು.

ಆಂಧ್ರಪ್ರದೇಶದ ರಾಜ್ಯಪಾಲರು ಆಂಧ್ರಪ್ರದೇಶದ ಪರವಾಗಿ ತಿ.ತಿ.ದೇ. ಈ ಪ್ರದರ್ಶನದಲ್ಲಿ ಭಾಗವಹಿಸ ಬೇಕೆಂದು ಕರೆನೀಡಿದಾಗ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ ವಿ.ಆರ್.ಕೆ. ಪ್ರಸಾದರು ಉಪವನ ವಿಭಾಧಿಕಾರಿ ಶ್ರೀ ಅಮ್ಮಣ್ಣನವರನ್ನು ಈ ಪ್ರಾತಿನಿಧಿಕ ಕಾರ್ಯಕ್ಕೆ ನಿಯಮಿಸಿದರು.

## ಹುಂಡಿಯಲ್ಲಿ ಲಾಟರಿ ಟಿಕೆಟ್

ಶ್ರೀವೆಂಕಟೇಶ್ವರ ಸ್ವಾಮಿ ದೇ ವಾ ಲಯ ದ ಹುಂಡಿಯಲ್ಲಿ ಅಜ್ಞಾತ ಭಕ್ತರೊಬ್ಬರು ತಮಿಳುನಾಡಿನ 41ನೆಯ ಪೊಂಗಲ್ ಡ್ರಾದಲ್ಲಿನ ಐವತ್ತು ಲಾಟರಿ ಟಿಕೇಟ್ಟುಗಳನ್ನು ಹಾಕಿದ್ದು, ಅವುಗಳಲ್ಲಿ FY 743883 ರ ಸಂಖ್ಯೆಯ ಟಿಕೆಟ್ಟಿಗೆ ಹತ್ತು ಸಾವಿರರೂಗಳ ಬಹುಮಾನ ಬಂದಿದೆಯೆಂದು ವರದಿಯಾಗಿದೆ.

## ಅಖಿಲ-ಭಾರತ ಕನ್ನಡ ಸಾಹಿತ್ಯ ಸಮ್ಮೇಳನ:

ಅಖಿಲ ಭಾರತ 53 ನೇ ಕನ್ನಡ ಸಾಹಿತ್ಯ ಸಮ್ಮೇಳನವು ಕರ್ನಾಟಕದ ಚಿಕ್ಕಮಗಳೂರಿನ ತಂಪು ವಾತಾವರಣದಲ್ಲಿ ದಿನಾಂಕ 13 ಮಾರ್ಚ್ 1981 ರಿಂದ 15 ಮಾರ್ಚ್ 1981 ರವರೆಗೆ ವೈಭವದಿಂದ ನಡೆಯಿತು. ಹಿರಿಯರ ಭಾಗವತ ಪಂಥಿ ಕವಿ ಪುರೋಹಿತಂ ತಿರು ನರಸಿಂಹಾಚಾರ್ಯರು ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಮೇಲುಕೋಟೆಯ ವಿದ್ವಾಂಸ ಹಿನ್ನೆಲೆಯಲ್ಲಿ ಹುಟ್ಟಿ ಮೈಸೂರಿನ ಹಿರಿಯ ಸಾಂಸ್ಕೃತಿಕ ವಾತಾವರಣದಲ್ಲಿ ತಮ್ಮ 76 ರ ನಂತರದ ವಯಸ್ಸಿನಲ್ಲೂ ಕಾವ್ಯ ಕೃಷಿಗೈಯ್ಯುತ್ತಿರುವ ಈ ಬಾನೆತ್ತರದ ಕವಿ ತಮ್ಮ ಸಮ್ಮೇಳನಾಧ್ಯಕ್ಷ ಭಾಷಣದಲ್ಲಿ ಕನ್ನಡಿಗರಿಗೆ ಎಲ್ಲ ಒಳಿತೂ ಕೈಗೂಡಿ ಬಾಳು ಸುಖಮಯವಾಗಿ ಶಿವದತ್ತ ಸಾಗಬೇಕೆಂದು ಹಾರೈಸಿದರು.



ಶ್ರೀನಿವಾಸ ಮಂಗಾಪುರದಲ್ಲಿ ಈ ಬಾರಿಯಿಂದ ಶ್ರೀವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು ಆರಂಭವಾದವು ಸ್ವಾಮಿ ಬ್ರಹ್ಮೋತ್ಸವದ ಮುಖ್ಯ ಘಟ್ಟವಾದ ಸೂರ್ಯಪ್ರಭವಾಹನದ ಚಿತ್ರ.

ಸಂಸ್ಕೃತದ ಅರ್ಥವತ್ತಾದ ಹಾಸಿನ ಕನ್ನಡ ಗೀತ ರೂಪಕಗಳ ಕರ್ತೃ ಶ್ರೀ ಪು.ತಿ.ನ. ಅವರು 'ಹೊಸ ಚಿಗುರು ಹಳೇ ಬೇರು' ಜೊತೆಗೆ ಬೆಳೆದು ಕಾವ್ಯಸೀಮೆ ಸಮೃದ್ಧವಾಗ ಬೇಕೆಂದು ಬಯಸಿದವರು. ಆದರೆ ವಿದೇಶೀ ಸಂಸ್ಕೃತಿಗಳ ಆಚಾರಗಳ ಅನುಕರಣೆ ಅವರ ದೃಷ್ಟಿಯಲ್ಲಿ ಅನಗತ್ಯವಾದದ್ದು. ವಿಮರ್ಶನ ರಂಗದಲ್ಲಿ ಸುಜನಾ ಅವರ ವ್ಯಾಸ ಪಂಪ ನಾರಣಪ್ಪರನ್ನು ಕುರಿತ ತೌಲನಿಕ ಪ್ರಬಂಧವೂ ಎ. ಎನ್. ಮೂರ್ತಿರಾಯರ 'ಸೀತಾ ಪರಿತ್ಯಾಗ' ಕೃತಿಯಲ್ಲಿನ ವಾಲ್ಮೀಕಿ ಕಾಳಿದಾಸ ಭವಭೂತಿಗಳ ತೌಲನಿಕ ಅಧ್ಯಯನವೂ ಉತ್ತಮವೆಂದು ಅಭಿಪ್ರಾಯ ಹೊಂದಿದ ಅವರು ಇಂತಹ ಅಧ್ಯಯನ ಹೆಚ್ಚಬೇಕೆಂದರು.

ಮೂರು ದಿನಗಳ ಕಾಲ ನಡೆದ ವಿವಿಧ ಸಾಹಿತ್ಯಗೋಷ್ಠಿಗಳಲ್ಲಿ 'ಸಾಹಿತ್ಯ ಮತ್ತು ಇತರ ಕಲೆಗಳು' ಹಾಗೂ 'ನಾನೇಕೆ ಬರೆಯುತ್ತೇನೆ' ಮೊದಲಾದವು ವಿಶಿಷ್ಟವಾಗಿದ್ದವು. ಶ್ರೀ ಶಿವರಾಮಕಾರಂತರ ಭಾಷಣವಂತೂ ಅತಿ ಹೆಚ್ಚಿನ ವಿಚಾರವನ್ನು ತುಂಬಿಕೊಂಡು ಪ್ರತಿನಿಧಿಗಳನ್ನು ಹೆಚ್ಚು ಸೆಳೆಯಿತು ಎನ್ನ ಬಹುದು. ಕನ್ನಡ ಆಸ್ತಿ ಮಾಸ್ತಿಯವರೂ ಭಾಗವಹಿಸಿದ ಸಮ್ಮೇಳನ 15-3-81 ರಂದು ಮುಕ್ತಾಯಗೊಂಡಾಗ ಕರ್ನಾಟಕದ ಹಾಗೂ ಹೊರಗಣ ಪ್ರದೇಶಗಳಿಂದ ಬಂದ ಪ್ರತಿನಿಧಿಗಳಿಗೆ ಧನ್ಯತೆಯ ಭಾವಉಂಟಾಗಿದ್ದಿತು ಎನ್ನಬಹುದು.

## ಉಚಿತ ಲಾಡು ವಿತರಣೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಸಂದರ್ಶನಕ್ಕೆ ಬಂದ ಭಕ್ತರಿಗೆ ಉಚಿತವಾಗಿ ದೇವರ ಪ್ರಸಾದವಾದ ಲಾಡುವನ್ನು ವಿತರಿಸಲು ಯೋಚಿಸಲಾಗಿದೆ. 1981ರ ಏಪ್ರಿಲ್ 5 ರಿಂದ ಎಂದರೆ ದುರ್ಮತಿ ನಾಮ ಸಂವತ್ಸರದ ಪ್ರಥಮ ದಿನದಿಂದ ಆರಂಭವಾಗುವ ಈ ಯೋಜನೆಯನ್ವಯ ಸ್ವಾಮಿ ದರ್ಶನಾನಂತರ ಹೊರಬರುವಾಗ ಭಕ್ತರಿಗೆ ಈಗ ಪ್ರಸಾದ ನೀಡುವ ಸ್ಥಳದಲ್ಲಿ 25 ಗ್ರಾಂ ತೂಕದ ಲಾಡುವನ್ನು ನೀಡಲಾಗುವುದು. ದಿನವೊಂದಕ್ಕೆ 25 ಸಾವಿರ ಜನರು ಶ್ರೀದೈವವನ್ನು ಸಂದರ್ಶಿಸುವರು. ಈ ಯೋಜನೆಯನ್ನು ಕಾರ್ಯಗತ ಗೊಳಿಸಲು ಸಾರ್ವಜನಿಕರಿಂದ ದಿನವೊಂದಕ್ಕೆ ಲಕ್ಷರೂಗಳ ಮೂಲಧನವನ್ನು ದತ್ತಿಯಾಗಿ ಸ್ವೀಕರಿಸಲಾಗುವುದು ಎಂದು ಆಡಳಿತ ನಿರ್ವಾಹಕ ಮಂಡಳಿ ತೀರ್ಮಾನಿಸಿದೆ.

## ವಿವಾಹೋಪನಯುಗಳ ದರಗಳಲ್ಲಿ ಹೆಚ್ಚಳ

ತಿರುಮಲೆಯ ಪುರೋಹಿತ ಸಂಘವು ಏರುತ್ತಿರುವ ಜೀವನಾವಶ್ಯಕ ವಸ್ತುಗಳ ದರಗಳ ಹಿನ್ನೆಲೆಯಲ್ಲಿ ವಿವಾಹೋಪನಯನೇತ್ಯಾದಿಗಳ ದರಗಳನ್ನು ಹೆಚ್ಚಿಸಿದ್ದು ತಿ.ತಿ.ದೇ. ಅವುಗಳನ್ನು ಅಂಗೀಕರಿಸಿದೆ. ಹೊಸದರಗಳು ಕೆಳಕಂಡಂತಿವೆ.

| | |
|---|---|
| ಬ್ರಾಹ್ಮಣ, ವೈಶ್ಯ ವಿವಾಹ ಹೊಸದರ | ರೂ 36=00 |
| ಉಪನಯನ | " ರೂ 32=00 |
| ಇತರರ ವಿವಾಹ (ಹೋಮರಹಿತ) | " 22=00 |
| " (ಹೋಮಸಹಿತ) | " 34=00 |
| ಸತ್ಯನಾರಾಯಣವ್ರತ | " 18=00 |
| ಕೇಶಖಂಡನ ಹಾಗೂ ಇತರ ಪೂಜೆಗಳು | " 8 =00 |
| ಪಿಂಡ ಪ್ರದಾನ | " 5 =00 |
| ಹಿರಣ್ಯ ಗೋದಾನ | " 6 =00 |
| ಅನ್ನದಾನ | " 3 =00 |
| ಸಾಲಿಗ್ರಾಮದಾನ | " 1 =25 |
| ಸಂಕಲ್ಪ | " 1 =00 |
| ಹೊಸಪೂಜೆಗಳು | ದರ ರೂ |
| ಶೋಡಶ ಮಹಾದಾನ | " 16=00 |
| ದಶದಾನ | " 10=00 |
| ನವಗ್ರಹದಾನ | " 9 =00 |
| ಸಂಕಲ್ಪ ಪೂಜೆ | " 1 =00 |

ಈ ದರಗಳು ಕೂಡಲೇ ಜಾರಿಗೆ ಬಂದಿರುತ್ತವೆ.

## ವೇದಪಾಠಶಾಲಾ ವರ್ಗಾವಣೆ

ವೇದಗಳಲ್ಲಿ ಉನ್ನತ ಶಿಕ್ಷಣದ ಉದ್ದೇಶದಿಂದಾಗಿ ತಿರುಮಲೆಯ ಶ್ರೀ ವೆಂಕಟೇಶ್ವರ ವೇದಪಾಠಶಾಲೆಯನ್ನು ಈಚೆಗೆ ಚಂದ್ರಗಿರಿಯ ನರಸಿಂಗಪುರಕ್ಕೆ ವರ್ಗಾಯಿಸಲಾಯಿತು. ಫೆಬ್ರವರಿ 14 ರಂದು ನಡೆದ ಈ ವರ್ಗಾವಣೆಯನ್ನು ಗುರುತಿಸಲು ಒಂದು ಕಿರಿಯ ಸರಳ ಸಮಾರಂಭವನ್ನು ಶ್ರೀ ಪಿ. ವಿ. ಆರ್. ಕೆ. ಪ್ರಸಾದರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಅವರು ಹೊಸ ಶಾಲೆ ಆವರಣವನ್ನು ಉದ್ಘಾಟಿಸಿ ಶಾಲೆಗೆ ಒಳ್ಳೆಯ ಭವಿಷ್ಯವನ್ನು ಹಾರೈಸಿದರು.



ತಿರುಮಲೆಯ ವೇದಪಾಠಶಾಲೆಯನ್ನು ಚಂದ್ರಗಿರಿಯ ನರಸಿಂಗಪುರಕ್ಕೆ ವರ್ಗಾಯಿಸಿದಾಗ ಅದರ ಅಧಿಕೃತ ಆರಂಭವನು ಸಾಂಕೇತಿಕವಾಗಿ ತಿಳಿಸುತ್ತಿರುವ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್.



Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೇಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ, 1—3—1981 ರಿಂದ

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ವಿಶೇಷ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25/– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.

3. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐವರಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.

4. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ, 1—3—1981 ರಿಂದ

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ವಿಶೇಷ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25/– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.
3. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐವರಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.
4. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 7–00 ನಡುವೆ ಜರುಗುವುವು.



ಈತನೀಗ ವಾತಜಾತ ತನ
ತಾತಗಾಗಿ ದನುಜಕುಲವ
ಘಾತಿಸಿದ ವನೌಕಸಾರ್ಯ ॥ ಪ ॥

ಅಂಬುಧಿಯ ಲಂಘಿಸಿ ಭರದಿ
ಲಂಬ ಶಿಖರದಲ್ಲಿ ದುಮುಕಿ
ಸಂಭ್ರಮದಿಂದ ಲಂಕೆಗೆ ಪೋಗಿ
ಅಂಬುಜಾಕ್ಷಿಯನರಸಿದಾತ

ಧರಣಿಸುತೆಯ ಚರಣಕೆರಗಿ
ಕರುಣಿ ರಾಮನುಂಗುರವಿತ್ತು
ಕರದಿ ದಾನವರನು ಸವರಿ
ಶರಧಿಯನುತ್ತರಿಸಿದಾತ

ಕಡಲತಡಿಯೊಳಿರ್ದ ಕಪಿಗ
ಳೊಡನೆ ರಾಮನಂಘ್ರಿಗೆರಗಿ
ಮಡದಿ ಚೂಡಾರತ್ನವಿತ್ತು
ಕಡು ಕೃತಾರ್ಥನೆನಿಸಿಕೊಂಡ

ಶ್ರೀ ವ್ಯಾಸರಾಯರು.

(ಮಹಾಲಕ್ಷ್ಮೀಪುರದ ಹನುಮಂತ: ಚಿತ್ರ: ಸೀತಾಪ್ರಿಯ)

## ಸಪ್ತಗಿರಿ ಚಂದಾದಾರರಲ್ಲಿ

ವಾರ್ಷಿಕ ಚಂದಾ ರೂ. 6–00

ಸಪ್ತಗಿರಿ ಮಾಸಪತ್ರಿಕೆಯ ಚಂದಾದಾರರುಗಳಲ್ಲಿ ಕೆಳಕಂಡವರ ಚಂದಾಗಳು 30–6–81 ತಾರೀಖಿಗೆ ಮುಗಿಯಲಿವೆ. ಚಂದಾದಾರರು ಸಹಾನುಭೂತಿಯಿಂದ ಹಣವನ್ನು ಮನಿಯಾರ್ಡರು ಮೂಲಕ ಕಳುಹಿಸಿ ಕೊಡಬೇಕೆಂದು ಕೋರುತ್ತೇವೆ. ಚಂದಾದಾರರು ದಯವಿಟ್ಟು ಮನಿಯಾರ್ಡರು ಕೂಪನಿನಲ್ಲಿ ತಮ್ಮ ಚಂದಾ ಸಂಖ್ಯೆಯನ್ನು ನಮೂದಿಸಬೇಕು.

16, 19, 26. 31, 43, 52, 62, 64, 65, 138, 141, 277, 280. 281, 286, 289, 295, 314, 332, 508, 517, 548, 554, 598, 603, 611, 612, 613, 617, 618, 1098, 1099, 1101, 1102, 1103, 1104, 1105, 1108to1122, 1124, 1125, 1127, 1128, 1129, 1131 to 1141, 1143 to 1148, 1149 to 1157, 1167, 1194, 1258, 1414,.

ಚಂದಾ ಹಣವನ್ನು ಎಮ್. ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು. ಚೆಕ್ಕುಗಳನ್ನು ಕಳುಹಿಸಿದ್ದಲ್ಲಿ, ಅಥವಾ ವಿಳಾಸ ತಪ್ಪಿದಲ್ಲಿ, ಆಗುವ ಆಲಸ್ಯಕ್ಕೆ ಯಾವ ವಿಧದಲ್ಲೂ ಈ ಕಾರ್ಯಾಲಯ ಬಾಧ್ಯತೆ ವಹಿಸಲಾರದು. ಚಂದಾದಾರರೆಲ್ಲರೂ ಸಹೃದಯತೆಯಿಂದ ಚಂದಾ ಕಳುಹಿಸಬೇಕೆಂದು ವಿನಂತಿ. ಮಿಕ್ಕ ವಿವರಗಳಿಗೆ :

ವೆಲ್‌ಫೇರ್ ಆಫೀಸರ್,
ಸೇಲ್ಸ್ ವಿಂಗ್,
ತಿ. ತಿ. ದೇ. ಪ್ರೆಸ್ ಕಾಂಪೌಂಡ್
**ತಿರುಪತಿ.**

---

**ಸಂದರ್ಶಿಸಿ** **ಆನಂದಿಸಿ**

# ಶ್ರೀ
# ಗೋವಿಂದರಾಜಸ್ವಾಮಿ ದೇವಾಲಯ
# ತಿರುಪತಿ
## ಬ್ರಹ್ಮೋತ್ಸವಗಳು

**ದಿನಾಂಕ 10–5–81 ರಿಂದ 19–5–81 ರ ವರೆಗೆ**

| | | |
|---|---|---|
| 10—5—81 | ಭಾನುವಾರ | ಅಂಕುರಾರ್ಪಣೆ |
| 15—5—81 | ಶುಕ್ರವಾರ | ಗರುಡೋತ್ಸವ |
| 18—5—81 | ಸೋಮವಾರ | ರಥೋತ್ಸವ |
| 19—5—81 | ಮಂಗಳವಾರ | ಅವಭೃತಸ್ನಾನ. |

ಆಸ್ತಿಕ ಭಕ್ತರು ಈ ಉತ್ಸವಗಳಲ್ಲಿ ಭಾಗವಹಿಸಿ ಸ್ವಾಮಿಯ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ.**